# ಷೇಕ್ಸ್‌ಪಿಯರ್ ನಾಟಕ ಕಥೆಗಳು

## (ನಾಲ್ಕು)

ವಿ. ಲಕ್ಷ್ಮೀನೃಸಿಂಹಶಾಸ್ತ್ರಿಗಳಿಂದ



ಕರ್ಣಾಟಕ ಪ್ರಕಟನಾಲಯ

ಬೆಂಗಳೂರು ಸಿಟಿ

೧೯೩೪

## ವಿ ಷ ಯ ಸೂ ಚಿ ಕೆ

## ಚಿತ್ರಗಳು

# ಪೀಠಿಕೆ

---

ಇಲ್ಲಿ ಪ್ರಕಟವಾಗಿರುವ ನಾಲ್ಕು ಕಥೆಗಳು ಮೊದಲು "ಪ್ರಬುದ್ಧ ಕರ್ಣಾಟಕ"ದ ಹದಿಮೂರನೆಯ ಸಂಪುಟದಲ್ಲಿ ಬಂದುವು. ಅವುಗಳನ್ನು ಈಗ ಹೀಗೆ ಪುಸ್ತಕ ರೂಪದಲ್ಲಿ ಪ್ರಕಟಿಸಲು ಅನುಮತಿಯನ್ನಿತ್ತುದಕ್ಕಾಗಿ ಈ ಕಥೆಗಳ ಲೇಖಕರಾದ ಕೈ|| ವ್ಯಾಕರಣದ ಲಕ್ಷ್ಮೀನರಸಿಂಹ ಶಾಸ್ತ್ರಿಗಳ ಮಕ್ಕಳು ಮ|| ವಿ. ಕೃಷ್ಣಮೂರ್ತಿ ಅವರಿಗೆ ಸಂಘವು ಕೃತಜ್ಞವಾಗಿದೆ.

ಷೇಕ್ಸ್‌ಪಿಯರ್ ಮಹಾಕವಿಯು ಲೋಕಪ್ರಸಿದ್ಧನಾದ ನಾಟಕ ಕರ್ತ, ಆತನ ನಾಟಕಗಳ ಸತ್ತ್ವವನ್ನೂ ಸ್ವಾರಸ್ಯವನ್ನೂ ಅವುಗಳ ಕಥಾ ಸಂಗ್ರಹದಿಂದ ತಿಳಿಯುವುದು ಸಾಧ್ಯವಲ್ಲ. ಆದರೂ ಈ ಕಥೆಗಳಲ್ಲಿ ಆ ಮಹಾಕೃತಿಗಳ ಛಾಯೆಯನ್ನಾದರೂ ಕಾಣಬಹುದು, ಮೂಲವನ್ನು ಓದಲಾರದವರು ಇವುಗಳಿಂದಲೇ ಎಷ್ಟೋ ಆನಂದವನ್ನು ಪಡೆಯಬಹುದು. ಇದನ್ನು ದೊರಕಿಸಲು ಇಂಥ ಗದ್ಯಾನುವಾದಗಳು ಎಲ್ಲಾ ಭಾಷೆಗಳಲ್ಲಿಯೂ ಇವೆ. ಮ|| ಲಕ್ಷ್ಮೀನರಸಿಂಹಶಾಸ್ತ್ರಿಗಳು ಕನ್ನಡಿಗರಿಗೂ ಇವು ದೊರೆಯುವಂತಾಗಲೆಂದು ಈಗ್ಗೆ ಸುಮಾರು ಇಪ್ಪತ್ತೈದು ವರ್ಷಗಳ ಕೆಳಗೆ ಈ ಕಥೆಗಳನ್ನು ಬರೆದರು. ಅವುಗಳಲ್ಲಿ ಎಂಟು ಕಥೆಗಳು "ಷೇಕ್ಸ್‌ಪಿಯರ್ ಮಹಾಕವಿಯ ನಾಟಕ ಕಥಾನುವಾದ" ಎಂದು ಕ್ರಿಶ್ಚಿಯನ್ ಲಿಟರೇಚರ್ ಸೊಸೈಟಿಯವರಿಂದ ಪ್ರಕಟಿತವಾಗಿದ್ದುವು. ಈಗ ಇಲ್ಲಿ ಮತ್ತೆ ನಾಲ್ಕು ಕಥೆಗಳು ಬಂದಿವೆ. ಇವು ಆ ಮಹಾ ಕವಿಯ ಶ್ಲಾಘ್ಯರೂಪಕಗಳೆನ್ನಿಸಿಕೊಂಡಿರುವ ನಾಲ್ಕು ರುದ್ರನಾಟಕಗಳ ಅನುವಾದವಾಗಿವೆ. ಇವುಗಳ ಸೌಂದರ್ಯವನ್ನೂ, ಕವಿಯ ಪ್ರತಿಭಾ ಮಹತ್ತ್ವವನ್ನೂ ತಮ್ಮ ಸಾರವತ್ತಾದ ಶೈಲಿಯಲ್ಲಿ ಸಂಗ್ರಹವಾಗಿ ವಿವರಿಸಿ ಅವತರಣಿಕೆಯನ್ನು ಬರೆದುಕೊಟ್ಟದ್ದಕ್ಕಾಗಿ ಶ್ರೀಮಾನ್ ಎಸ್. ವಿ. ರಂಗಣ್ಣ, ಎಂ.ಎ., ಅವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಇದರಲ್ಲಿ ಸೇರಿಸಿರುವ ಚಿತ್ರಗಳ ಅಚ್ಚು ಮಾಡಿಸಲು ಬೇಕಾದ ರೇಖಾಚಿತ್ರಗಳನ್ನು ದಯವಿಟ್ಟು ಕೊಡಿಸಿಕೊಟ್ಟದ್ದಾಗಿ ಶ್ರೀಮಾನ್ ರಾಮಗೋಪಾಲ್, ಬಾರ್-ಅಟ್-ಲಾ, ಅವರಿಗೆ ನಮ್ಮ ವಂದನೆಗಳು.

೧೫-೫-೧೯೩೩
ಬೆಂಗಳೂರು

**ಕರ್ಣಾಟಕ ಸಂಘ**

# ವಿಜ್ಞಾಪನೆ

ನಮ್ಮ ತೀರ್ಥರೂಪರವರು ಭಾಷಾಂತರಿಸಿದ ಈ ನಾಲ್ಕು ಕಥೆಗಳನ್ನು, ತಮ್ಮ ಘನವಾದ 'ಪ್ರಬುದ್ಧ ಕರ್ಣಾಟಕ'ದಲ್ಲಿ ಮುದ್ರಿಸಿ, ಅನಂತರ ಪುಸ್ತಕರೂಪವಾಗಿ ಪ್ರಚುರಿಸಿದುದಕ್ಕಾಗಿ, ಬೆಂಗಳೂರು ಕರ್ಣಾಟಕ ಸಂಘದ ಕಾರ್ಯನಿರ್ವಾಹಕ ಸಮಿತಿಯವರಿಗೆ ನನ್ನ ಅನಂತವಾದ ವಂದನೆಗಳನ್ನು ಈ ಮೂಲಕ ಅರ್ಪಿಸುವೆನು.

ಪ್ರಥಮ ಮುದ್ರಣದಲ್ಲಿ ವ್ಯಾಕರಣದೋಷ, ಮುದ್ರಣದೋಷ— ಇತ್ಯಾದಿಗಳನ್ನೆಲ್ಲಾ, ಆಮೂಲವಾಗಿ ತಿದ್ದಿಕೊಟ್ಟು ಸಹಾಯ ಮಾಡಿದುದಕ್ಕಾಗಿ, ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳವರಿಗೆ ನನ್ನ ವಂದನೆಗಳನ್ನು ಅರ್ಪಿಸುವೆನು.

ಈ ಎರಡನೆಯ ಮುದ್ರಣವನ್ನು ಹೊರಪಡಿಸುವ ಕಾರ್ಯವನ್ನು ಸಂತೋಷದಿಂದ ವಹಿಸಿ, ಪುಸ್ತಕವನ್ನು ಪ್ರಚುರಿಸಿದುದಕ್ಕಾಗಿ, ಶ್ರೀಮಾನ್ ಡಿ. ವಿ. ಗುಂಡಪ್ಪನವರಿಗೆ ನಾನು ಕೃತಜ್ಞನಾಗಿರುವೆನು.

ಸಿಂಲಾ,
26-4-34

**ವ್ಯಾ. ಕೃಷ್ಣಮೂರ್ತಿ.**

# ಷೇಕ್ಸ್‌ಪಿಯರಿನ ವಿಷಾದ ನಾಟಕಗಳು

---

ಎಲ್ಲರನ್ನೂ ಬಡಿದು ಬಗ್ಗಿಸಿ, ರಾಗಗಳನ್ನುದ್ರೇಕಿಸಿ ಉಪಶಮನ ಗೈದು, ಮಾನವನ ಮೂಲಪ್ರಕೃತಿಯ ಕಡೆಗೆ ದೃಷ್ಟಿಯನ್ನು ತಳ್ಳಿ, ಅಂತಃಕರಣವನ್ನು ಪರಿಪಕ್ವಮಾಡುವ ಸಾಮರ್ಥ್ಯವು ಘನವಿಷಾದಕ್ಕೆ ಮಾತ್ರ ಉಂಟು. ಸೌಖ್ಯ ಸೋಪಾನದ ಮೇಲೆ ಪದ್ಮಾಸನದಲ್ಲಿ ವಿಶ್ರಮಿಸಿದ್ದರೆ ಬಾಳಿನ ಆಳ ತಿಳಿಯದು. ಎದ್ದು ಪುಟನೆಗೆದು, ದುಃಖದಲ್ಲಿ ದುಢುಮ್ಮೆಂದು ಮುಳುಗುವುದು ಅಗತ್ಯ. ಹಾಸ್ಯವೆನ್ನುವುದು ಸಂಸಾರ ಸಾಗರದ ಮೇಲೆ ಸುಳಿದಾಡುವ ಬಿಳಿಯ ನೊರೆ, ಭೀಭತ್ಸ ವಿಷಯ ನಾನಾ ಕಡೆಯಿಂದ ತೇಲಿಬಂದು ಅಲ್ಲಲ್ಲಿ ಗುಂಪುಕಟ್ಟಿರುವ ಪಾಚಿ ಕಸಕಡ್ಡಿ, ಶರೀರದ ಲವಲವಿಕೆಗೋಸ್ಕರ, ಸ್ವಲ್ಪಮಟ್ಟಿಗೆ ಹೃದಯದ ಸಂತೋಷಕ್ಕೋಸ್ಕರ, ಈಜಾಡುವುದೇ ಶೃಂಗಾರ ವ್ಯಾಪಾರ, ಗಾಢರಹಸ್ಯಗಳನ್ನು ಗೋಪ್ಯದಲ್ಲಿಟ್ಟುಕೊಂಡಿರುವ ತಟ್ಟತಳವನ್ನು ಮುಟ್ಟಿ, ನಿಜವಾದ ಅರಿವನ್ನು ಸಂಪಾದಿಸಬೇಕಾದರೆ ಭಯಮಿಶ್ರಿತ ಶೋಕವೇ ಉತ್ತಮ ತೈಲಕವಚ. ಆದ್ದರಿಂದ ಆ ಎರಡು ಭಾವಗಳನ್ನು ಧಾರಾಳವಾಗಿ ಸ್ಫುರಿಸುವ ವಿಷಾದ ನಾಟಕವು ಉತ್ಕೃಷ್ಟ ಕವಿಗಳ ಹುರುಡಿನ ಪ್ರಯೋಗ ಮನ್ನಣೆಯನ್ನೂ, ವಿಮರ್ಶಕ ಸಂತತಿಯ ಅವಿಶ್ರಾಂತ ಶ್ಲಾಘನೆಯನ್ನೂ, ವಾಙ್ಮಯ ಪ್ರಪಂಚದಲ್ಲಿ ಒಂದೇ ತರದ ಪೂಜ್ಯತೆಯನ್ನೂ ಪೂರ್ವದಿಂದಲೂ ಧಾರೆಯೆರೆಸಿಕೊಂಡಿದೆ. ಅದರ ಕರ್ತೃವಿಗೆ ಈಗಲೂ, ರಸಿಕತೆಯ ಇಳಿಗಾಲವೆಂಬ ಅಭಿಶಾಪವನ್ನು ಹೊತ್ತಿರುವ ಈಗಲೂ, ಗೌರವದ ಹರಿವಾಣ ಸಿದ್ಧವಾಗಿಯೇ ಇದೆ.

ಹಲಕೆಲವು ವಿಷಾದ ನಾಟಕ ನಿರ್ಮಾಪಕರು ಜಗತ್ತಿನ ವಿಭೂತಿ ಪುರುಷರೆಂಬ ಪ್ರೌಢವಿಖ್ಯಾತಿಯನ್ನು ಪಡೆದಿದ್ದಾರೆ. ಈಸ್ಕಿಲಸ್, ಸಾಫೊಕ್ಲೀಸ್, ಯೂರಿಪಿಡೀಸ್, ಆಲ್ಫಿಯರಿ, ಷೇಕ್ಸ್‌ಪಿಯರ್, ಕಾಲ್ಡೆರಾನ್, ರಾಸೀನ್, ಕಾರ್ನೀಲ್, ಗಯಟೆ, ವಿಕ್ಟರ್ ಹ್ಯೂಗೋ, ಇಬ್ಸನ್—ಸಾಹಿತ್ಯ ಕಲಾಭಿಮಾನಿಗಳ ನಿತ್ಯಸ್ಮರಣೆಗೆ ಯೋಗ್ಯವಾದ ದಿವ್ಯನಾಮಗಳು ಇವು.

ಇವರ ಕೃತಿಗಳನ್ನು ಉತ್ಸಾಹದಿಂದ ಪಠಿಸಿ ಪಾರಾಯಣ ಮಾಡಿದಲ್ಲಿ ಆನಂದವುಂಟು, ಕಲ್ಯಾಣವುಂಟು, ಮೋಕ್ಷವುಂಟು. ಟೆನಿಸನ್ ಕವಿಯು ಮೃತ್ಯುಶಯ್ಯೆಯಲ್ಲಿ ಮಲಗಿರುವಾಗ ಷೇಕ್ಸ್‌ಪಿಯರಿನ ಉದ್ಗ್ರಂಥವನ್ನು ಕೈಯಲ್ಲಿಟ್ಟುಕೊಂಡು ಪ್ರಾಣವನ್ನು ಬಿಟ್ಟನಂತೆ ಕಾವ್ಯದ ಸ್ವರ್ಗೀಯ ಸೌಂದರ್ಯವನ್ನು ಧ್ಯಾನಿಸಿ ಸಮಾಧಿಸ್ಥನಾದ ಅವನು ಮರುಳೋ, ಚಿರಂತನಾಚಾರ ಸಂಪ್ರದಾಯಗಳ ಮೇಲೆ ಕುಕ್ಕರಿಸಿ ಕುಳಿತು ಮುಕ್ತಿಗೆ ಮಾರ್ಗ ಜೋಯಿಸನ ಜಪವೆಂದು ನಂಬಿರುವ ನಾವು ಮರುಳೋ, 'ಉರಿಯುವನೆ ಬಲ್ಲ'. ಪರ್ವತಗಳಂತೆ ನೀಳ್ದು ನಿಂದಿರುವ ಈ ಕವಿಶ್ರೇಷ್ಠರಲ್ಲಿ ಇವನು ಹೆಚ್ಚು, ಅವನು ಕಡಮೆಯೆನ್ನುವ ಸಭಾಮರ್ಯಾದೆಯ ವಿನಿಯೋಗವು ಕೇವಲ ನಿರ್ದ್ರವ ಮನಸ್ಸಿನ ಲೆಕ್ಕಿಗರ ಕೆಲಸವೆಂದು ಕೆಲವರ ಭಾವನೆ. ಆದರೆ ಜ್ಞಾನಪರಿಪೂರ್ಣತೆಗೆ ಪರಸ್ಪರ ತುಲನೆಯು ಅತ್ಯವಶ್ಯಕ. ನಿರ್ಭರ ಪೌರುಷದ ರುದ್ರವ್ಯಕ್ತಿಗಳನ್ನು ಸೃಷ್ಟಿಸುವುದರಲ್ಲಿ ಒಬ್ಬನ ಸಾಹಸ; ಮರ್ಮಭೇದಕವಾದ ಮಾತುಗಳನ್ನು ಪಾತ್ರಗಳಿಂದ ಆಡಿಸಿ ಕರುಳು ಚುಚ್ಚುವ ಶಕ್ತಿ ಇನ್ನೊಬ್ಬನಿಗೆ ದತ್ತ, ಪ್ರಚಂಡ ಘಟನೆಗಳನ್ನು ರಾಶಿಯಾಗೊಡ್ಡಿ ರೋಮಾಂಚವನ್ನುಂಟುಮಾಡುವುದು ಮೂರನೆಯವನಿಗೆ ಇಷ್ಟ, ಸಮಾಜದ ದುರಂತ ಡೊಂಕೊಂದನ್ನು ತಿದ್ದಲನುವಾದ ಗಂಡುಗಲಿ ಹೇಗೆ ಅದಕ್ಕೆ ಗ್ರಾಸವಾದನೆಂಬುದನ್ನು ಕಣ್ಣಿಗೆ ಕಟ್ಟಿದಂತೆ ಮೂರ್ತಿಗೊಳಿಸುವುದೇ ಮತ್ತೊಬ್ಬನ ವಿಶೇಷ ಲಕ್ಷಣ. ಹೀಗೆ ಎಲ್ಲರೂ ದಾರುಣ ಪ್ರಸಂಗಗಳನ್ನೇ ಪ್ರತಿಪಾದಿಸಿದರೂ ವಿಷಯದ ವ್ಯಾಪ್ತಿ, ಪಾತ್ರಗಳ ಎತ್ತರ, ರಸದ ಪರಿಮಾಣ, ಅಳಲಿನ ಅಗಲ ಆಳ—ಇವುಗಳಲ್ಲಿ ಬಹಳಮಟ್ಟಿನ ವಿಭಿನ್ನತೆಯನ್ನು ಪ್ರದರ್ಶಿಸುತ್ತಾರೆ. ಯಾವ ನೆಲೆಯಿಂದ ಪರಿಶೀಲಿಸಿದರೂ ಪ್ರಬಲನಾಗಿಯೇ ತೋರಿ, ಅಗ್ರ ತಾಂಬೂಲಕ್ಕೆ ಅರ್ಹನಾದವನೆಂದರೆ ಷೇಕ್ಸ್‌ಪಿಯರ್. ಯಾವ ತರದ ತತ್ವಕ್ಕೆ ಬೇಕಾದರೂ ಕ್ರೈಸ್ತರ ವೇದ ಗ್ರಂಥವಾದ ಬೈಬಲಿನಲ್ಲಿ ಆಧಾರ ದೊರಕುತ್ತದಂತೆ. ಹಾಗೆ ಷೇಕ್ಸ್‌ಪಿಯರಿನಲ್ಲಿ ಇತರರ ವೈಶಿಷ್ಟ್ಯ ಸೂಚಕ ಸತ್ವಗಳೆಲ್ಲವೂ ಕಾಣಬರುತ್ತವೆ; ಅವನ ಮಹಿಮೆಯ ಹೆಗ್ಗುರುತಾದ ಸತ್ವಗಳಾದರೋ ಸಂಪೂರ್ಣವಾಗಿ ಅವನವೇ.

ಒರಿಯು ಮೋಹದ ಮಾತಲ್ಲ, ಷೇಕ್ಸ್‌ಪಿಯರನು ವಿಷಾದರೂಪಕ ಕಲೆಗೆ ಕಳಶಪ್ರಾಯ! ಅವನ ರಚನೆಯು ಕಾವ್ಯಪ್ರಪಂಚದ ವಿಸ್ತಾರವನ್ನೂ ಆಧಿಕ್ಯವನ್ನೂ, ದೇದೀಪ್ಯ ಮೂರ್ತಿಗಳ ಓಜಸ್ಸನ್ನೂ ಸಂಸ್ಕಾರವನ್ನೂ, ವಸ್ತುವಿನ ಔನ್ನತ್ಯವನ್ನೂ ಪರಿಪುಷ್ಟಿಯನ್ನೂ, ರಸದ ಉತ್ಕರ್ಷವನ್ನೂ ತೀವ್ರತೆಯನ್ನೂ, ಭಾಷೆಯ ವ್ಯುತ್ಪತ್ತಿಯನ್ನೂ ಸ್ವಾತಂತ್ರ್ಯವನ್ನೂ ಸವಿದು ಸವಿದು ದಣಿಯದ ಕೆಲವರು ಆಶ್ಚರ್ಯಚಕಿತರಾಗಿ, ಇಷ್ಟೊಂದು ಸಾಮರ್ಥ್ಯಕ್ಕೆ ಸ್ವಾಮಿಯಾದ ಮನುಷ್ಯನಿರುವುದು ಸಾಧ್ಯವೇ ಎಂದು ಕೂಡ ಸಂಶಯಪಟ್ಟಿದ್ದಾರೆ! ಮತ್ತೆ ಕಲವರು ಒಬ್ಬನ ಪ್ರತಿಭಾ ಶಕ್ತಿಯ ಕೃಷಿಗೆ ಈ ಅಗಾಧ ಫಲವೆಂದಿಗೂ ಒದಗಿರಲಾರದು. ಯಾವುದೋ ಕವಿಪರಿಷತ್ತೊಂದು ನಾಟಕಗಳನ್ನು ನಿರ್ಮಿಸಿರಬೇಕೆಂದು ಗಂಭೀರವಾಗಿ ಸೂತ್ರವನ್ನುಚ್ಚರಿಸಿಬಿಟ್ಟಿದ್ದಾರೆ ಷೇಕ್ಸ್‌ಪಿಯರಿನ ಉದ್ದಿಶ್ಯವಾಗಿ ಆಗಿರುವಷ್ಟು, ಈಗಲೂ ಆಗುತ್ತಿರುವಷ್ಟು, ಲೇಖನಿಯುದ್ಧವು ಇನ್ನಾವ ಕವಿಯ ನೆಳಲಿನಲ್ಲಿಯೂ ಆಗಿಲ್ಲ, ಆಗುವ ಸೂಚನೆಯಿಲ್ಲ. ಅವನನ್ನೂ ಮತ್ತು ಅವನ ಕಾವ್ಯಗಳನ್ನೂ ಕುರಿತ ಟೀಕೆಗಳು ಇತರ ನಾಲ್ಕಾರು ಕವಿವರರ ಮೇಲಿನ ಟೀಕೆಗಳ ಮೊತ್ತವನ್ನು ಮೀರಿಸಿರುವುವು. ಅವುಗಳದ್ದೇ ಒಂದು ದೊಡ್ಡ ಪುಸ್ತಕಭಂಡಾರವೆಂದರೆ ಅತಿಶಯೋಕ್ತಿಯಾಗಲಾರದು.

ನಾಯಕನಂತೆ ನಾಟಕ. ಹ್ಯಾಮ್ಲೆಟ್, ಲಿಯರ್, ಒಥೆಲೋ, ಮೆಕ ಬೆತ್, ಆಂಟೊನಿ ಮೊದಲಾದ ಷೇಕ್ಸ್‌ಪಿಯರಿನ ಮೆದುಳಿನ ಮಹಾಪುತ್ರರು ಸಾಹಿತ್ಯಲೋಕದ ಚಿರಜೀವಿಗಳು ಅವರಲ್ಲಿ ಕಲವರು ರಸಜ್ಞಮಂಡಲಿಗೆ ಕೊನೆಗಾಣದ ಸಮಸ್ಯೆಗಳೂ ಆಹುದು. ಅವರ ಸ್ವಭಾವಗಳ ಅಧಿಷ್ಠಾನ ಧರ್ಮವನ್ನು ಚಿಂತಿಸಿದರೆ, ಅವರೂ ನಮ್ಮ ಹಾಗೆಯೇ; ಅಂದರೆ ನಾವು ಅವರ ಹಾಗಲ್ಲ, ಖಂಡಿತ! ರಿಚರ್ಡ್, ಮೆಕ್‌ಬೆತ್‌ರಬ್ಬರು ಮಾತ್ರ ದುರಾತ್ಮರು, ದುರ್ಮಾರ್ಗಿಗಳು. ಉಳಿದವರೆಲ್ಲರೂ ಶೀಲವಂತರು, ಸತ್ಯವಿಶ್ವಾಸಿಗಳು, ಉದಾತ್ತಗುಣಗಳಿಂದ ನಿಬಿಡರಾದವರು. ರಿಚರ್ಡ್, ಮೆಕ್‌ಬೆತರು ತಮ್ಮ ಕೆಡುಕಿನ ಆನೆ ಹೊರೆಯನ್ನು ಹೊತ್ತು, ನರಳಿ, ಬಿದ್ದುಹೋಗು ವುದು ನ್ಯಾಯ. ಆದರೆ ಮಿಕ್ಕನಾಯಕರು ಸತ್ಪುರುಷರು: ಅವರಿಗೂ

ಏತಕ್ಕೆ ಭಾವೋದ್ರೇಕದ ಸೂಕುನುಗ್ಗು, ಒಳಗಿನ ಹೊಡೆದಾಟದ ಉಲ್ಲೋಲ ಕಲ್ಲೋಲ, ಅಪರಿಮಿತ ವೇದನೆ, ಕಡೆಗೆ ಅನಿರೀಕ್ಷಿತ ಘೋರಮರಣ? ಮರ್ತ್ಯದಿದಿರಿಗೆ ಕನ್ನಡಿಯನ್ನು ಹಿಡಿದು ಅದರ ಯಥಾರ್ಥ ಪ್ರತಿಬಿಂಬವನ್ನು ತನ್ನ ನಾಟಕದಲ್ಲಿ ಚಿತ್ರಿಸುವ ಪ್ರಾಮಾಣಿಕತೆ ಷೇಕ್ಸ್‌ಪಿಯರಿನಲ್ಲಿದೆ. ಸೌಜನ್ಯದಿಂದ ಸೌಖ್ಯ (ಲೌಕಿಕಾರ್ಥದಲ್ಲಿ) ವೆಂಬುದು ಮಕ್ಕಳ ಬಾಯಿಪಾಠದ ನೀತಿಯೇ ಹೊರತು, ಕಿಲ್ಬಿಷ ತುಂಬಿ ಅಕ್ರಮವಾಗಿರುವ ಜನಜೀವನದ ಸೈಜಸ್ಥಿತಿಯ ವರ್ಣನೆಯಲ್ಲ. ಒಳ್ಳೆಯದು ಯಾವಾಗಲೂ ನಿರುಪದ್ರವಿ, ಅದರ ಆ ಸರಳಸ್ವರೂಪವೇ ಬಾಗಿದ ವಸ್ತುವಿನ ಬೆನ್ನು ಮುರಿಯೋಣೆಂಬ ಚಿತ್ತವುಳ್ಳ ಕೆಟ್ಟುದನ್ನು ರೇಗಿಸಿಬಿಡುವುದು. ಅದಕ್ಕೆ ಕ್ಷಾಂತಿಯೊಂದೇ ಗುರಾಣಿ; ಇದಕ್ಕೆ ಅರಿಷಡ್ವರ್ಗದ ಅನಂತಸಹಾಯ. ಅಸಮಾನ ಅನುಕೂಲವು ಬೆಂಬಲಗೊಡುತ್ತಿದ್ದರೂ, ಆ ಕಲಹದಿಂದ ಕೆಟ್ಟುದಕ್ಕೂ ಪ್ರಯೋಜನವಿಲ್ಲ. ಕಲ್ಪಿತ ಕಥೆಯಲ್ಲಿ ಒರುವ ಹೆಬ್ಬಾವಿನಂತೆ ಅದು ತನ್ನನ್ನು ತಾನೇ ನುಂಗಿಕೊಳ್ಳುತ್ತದೆ. ಒಳ್ಳೆಯದಕ್ಕೆ ಆಮುಷ್ಮಿಕ ಘಟ್ಟದಲ್ಲಿ ವಿಜಯಮಾಲೆ ಸಂದರೂ ಐಹಿಕ ರಂಗದಲ್ಲಿ ಕೋಟಲೆಯ ಪರಂಪರೆಯು 'ಲಲಾಟಲಿಖಿತ'. ಇರಲಿ. ಪುಟಕ್ಕೆ ಹಾಕಿದರೆ ತಾನೆ ಚಿನ್ನದ ಪಸುಮೆ ಸರ್ವಜನವಿದಿತವಾಗುವುದು? ಇನ್ನೊಂದು ಸಂಗತಿ. ಮರ್ಮವಿದನಾದ ಷೇಕ್ಸ್‌ಪಿಯರನು ಆ ನಾಯಕರನ್ನು ಬರಿಯ ಸುಗುಣಗಳ ನೀರಸಮುದ್ದೆಯನ್ನಾಗಿ ಮಾಡಿ ಕೂರಿಸದೆ, ಅವರೊಬ್ಬೊಬ್ಬರಲ್ಲಿಯೂ ಒಂದೆರಡು ಅಲ್ಪದೋಷಗಳನ್ನಿಟ್ಟಿದ್ದಾನೆ. ಸ್ವಲ್ಪ ಮಾಲಿನ್ಯವಿಲ್ಲದಿದ್ದರೆ ಅವರು ಇಹಲೋಕ ವಾತಾವರಣದಿಂದ ಮೇಲಕ್ಕೆ ಹಾರಿ ರೆಕ್ಕೆಯಿಲ್ಲದ ಗಂಧರ್ವರಾಗಿಬಿಡುತ್ತಿದ್ದರು. ಅನಂತರ ಅವರ ವಿಷಯದಲ್ಲಿ ನಮ್ಮ ಸಂತಾಪ, ತಾದಾತ್ಮ್ಯಭಾವ, ಹುಮ್ಮಸ್ಸುಗಳು ತಾವಾಗಿಯೇ ಕುಗ್ಗಿಹೋಗಿ ಕೃತಕವಾಗುತ್ತಿದ್ದುವು. ಲಿಯರಿನ ಅರುಳುಮರುಳು, ಒಥೆಲೋವಿನ ವಿವೇಚನೆಯಿಲ್ಲದ ಸ್ನೇಹ, ಹ್ಯಾಮ್ಲೆಟನ ದೀರ್ಘಸೂತ್ರತೆ, ಆಂಟೊನಿಯ ಕಾಮೋದ್ವೇಗ, ಕೋರಿಯೊಲೇನಸ್ಸನ ಅಹಂಕಾರ—ಇವು ಸಾಮಾನ್ಯ ಕಳಂಕಗಳು, ಸಾಧಾರಣವಾಗಿ

ಅನೇಕರಲ್ಲಿರಬಹುದಾದ ಕಳಂಕಗಳು. ಅವರೆಲ್ಲರನ್ನೂ ಸಾಯಿಸಲು ಅವೇನೂ 'ಕುಳಿಕನ ಪಲ್ಲಗಳ'ಲ್ಲ ! ಆದರೆ ನಾಯಕರನ್ನು ಸುತ್ತಿರುವ ವಿಷಮ ಸನ್ನಿವೇಶದಲ್ಲಿ, ಸ್ಥಳ ಕಾಲ ಪಾತ್ರ ಪ್ರಭಾವದಿಂದ, ಅವು ಬಲಿದು, ಕೊಬ್ಬಿ ಹೆಬ್ಬುಲಿಗಳಾಗಿ ತಮ್ಮನ್ನು ಪೋಷಿಸಿದವರನ್ನೇ ಹಿಂಸಿಸಿ ತಿನ್ನುತ್ತವೆ. ಸಂಬುವ ಜಾಯಮಾನದ ಒಥೆಲೋವಿಗೆ ಕುಟಿಲದ ತೌರೂರಾದ ಇಯಾಗೋವೇ ಪ್ರಾಣಾಪ್ತನಾಗಬೇಕೆ? ಲಿಯರನ ವೃದ್ಧಾಪ್ಯವು ಇನ್ನಾವ ಭ್ರಾಂತಿಗೂ ಹೋಗದೆ ಗೋಮುಖವ್ಯಾಘ್ರಗಳಾದ ಇಬ್ಬರು ಹಿರಿಯ ಹೆಣ್ಣುಮಕ್ಕಳೇ ತನ್ನ ಪ್ರೇಮದ ಕುವರಿಯರೆಂದು ಬಗೆದು, ತನ್ನ ರಾಜ್ಯವನ್ನೇ ಅವರಿಗೆ ಹಂಚಿಕೊಟ್ಟು ಅವರ ಕೈಯ ಕೂಸಾಗುವ ಮೋಸಕ್ಕೆ ತೆರಳಬಹುದೆ? ಪೂರ್ವಾಪರ ವಿಮರ್ಶೆಯುಕ್ತವಾದದ್ದು, ಆದರೆ ಕ್ಲಾಡಿಯಸ್ಸನು ದುರ್ಲಾಲಸೆಯ ಪಶು, ದುಷ್ಟ, ಭ್ರಾತೃಹತಕನೆಂಬುದು ಅಂಗೈಯ ಹುಣ್ಣಿನಂತೆ ಸ್ಪಷ್ಟವಾದ ಮೇಲೂ ಹ್ಯಾಮ್ಲೆಟನಿಗೆ ಮುಖ್ಯಗಡಚಣೆಯಾದ, ಕರ್ತವ್ಯ ಮೌಢ್ಯವನ್ನು ಹೆಪ್ಪುಗಟ್ಟಿಸುವ ಆಲೋಚನೆಯ ಗೋಜೇಕೆ? ಅಂತು, ಸಣ್ಣ ಕಿಡಿಯೊಂದು ಬೀಸುವ ಬಿರುಗಾಳಿಗೊಳಗಾಗಿ, ಉರಿದೆದ್ದು ಕಾಡುಬೇಗೆಯಾಗಿ, ಬಹು ಪ್ರದೇಶವನ್ನು ಸುಟ್ಟು ಭಸ್ಮಮಾಡುವುದು. ಒಂದು ಕಡೆಯಿಂದ ಗಮನಿಸಿದರೆ, ಅವರುಣ್ಣುವ ಬೆಳೆಯು ಅವರು ಬಿತ್ತಿದುದೇ ಎಂದು ಭಾಸವಾಗುತ್ತದೆ. ನಿಜ. ಆದರೆ ಮೊದಲು ಬಿತ್ತಿದುದೇನು? ಈಗ ಬಂದಿರುವ ಬೆಳೆಯೇನು? ಕಾರ್ಯ, ಕಾರಣಗಳಿಗೆ ಅನುಗುಣವಿರಬೇಡವೆ ಕೊಂಚವಾದರೂ? ಮತ್ತು ಅಜ್ಞಾನದಿಂದಲಾದರೂ ತಾವು ಹಾನಿಯನ್ನು ಬಗೆಯುತ್ತಿದ್ದೇವೆಂದು ಅವರಿಗೆ ಸ್ವಪ್ನದಲ್ಲಿಯೂ ಬೋಧೆಯಿಲ್ಲ. ತಮ್ಮ ಶ್ರೇಯಸ್ಸಿಗೂ ನಾಡಿನ ಶ್ರೇಯಸ್ಸಿಗೂ ತಮ್ಮ ನಡೆವಳಿಕೆ ಕಾಮಧೇನುವಾಗಬೇಕೆಂಬುದೇ ಅವರ ಶುದ್ಧ ಸಂಕಲ್ಪ. ಆದರೆ ಬಯಸುವುದೊಂದು, ಪಡೆಯುವುದೊಂದು. ಒಬ್ಬೊಬ್ಬರೂ ಭೂಮಿಯ ಭಾರವನ್ನು ಹೆಗಲಮೇಲೆ ಎತ್ತಿಟ್ಟುಕೊಳ್ಳಬಲ್ಲ ದರ್ಪಯುತರು: ಅಂಥವರು ಹಗ್ಗವೆಂದು ಹಿಡಿದುದು ಹಾವಾಗಿ ಪರಿಣಮಿಸಬಹುದೇ! ತಿಲಕವೆಂದು ತಳೆಯಹೋದರೆ ಮಸಣ ಬೂದಿಯಾಗಬಹುದೇ! ಅದರ ಅನುಮೇಯವಿಷ್ಟೆ: ದೇವತಾಂಶವನ್ನು

ಧರಿಸಿದ್ದರೂ ಮನುಷ್ಯ ಮನುಷ್ಯನೇ! ನರನಾದವನು ಬಹುದೂರ, ಕೊನೆಗೆ ಮಿನುಗುವ ಚುಕ್ಕಿಗಳ ಪರ್ಯಂತ, ತನ್ನ ಕರವನ್ನು ಚಾಚಬಲ್ಲ, ಆದರೂ, ಆ ಎಲ್ಲೆಯಿಂದಾಚೆಯಿದ್ದುಕೊಂಡು, ಅವನ ಎಲ್ಲೆಕಟ್ಟಿನಲ್ಲಿಯೂ ಗುಪ್ತವಾಗಿ ಅಧಿಕಾರವನ್ನು ಚಾಲಿಸುವ ಯಾವುದೋ ಒಂದು ಅಪರಿಹಾರ್ಯ ತೇಜಸ್ಸು ಉಂಟೆಂಬುದು ಗಂಟೆಹೊಡೆದಂತೆ ನಿರ್ಧರ.

ಕವಿಯು ನಮ್ಮನ್ನು ಕೇಳುವ ತೊಡಕಿನ ಪ್ರಶ್ನೆಗಳಲ್ಲಿ ಇದು ಕಠಿಣತಮವಾದುದು. ಅವನ ನಾಟಕ ಸಾಮ್ರಾಜ್ಯವನ್ನಾಳುವ ಈ ಶಕ್ತಿ ಯಾವುದು? ಅದು ಪ್ರಾಚೀನ ಗ್ರೀಕರು ನಂಬಿದ್ದ ಪರಿವಿಡಿಯ ಶಾಪವಲ್ಲ, ತಿರ್ಯಗ್ಜಂತುಗಳನ್ನು ಒಂದು ಹವಣಿನ ಮೇಲೆ ಹೆಚ್ಚಗೊಡದ ಮತ್ಸರದ ಮಾರಿಯಲ್ಲ. ಆಧುನಿಕರು ಬಯ್ಯುವ ಸಮಾಜದ ಪಾಷಾಣನಿಯಮವೂ ಅಲ್ಲ. ಮತಗಳು ಆರಾಧಿಸುವ ದೇವರಲ್ಲ, ಪಂಡಿತರು ಜಿಜ್ಞಾಸೆಮಾಡುವ ಕರ್ಮವಲ್ಲ; ಪಾಮರರು ಬಳಕೆಯಲ್ಲಿಟ್ಟುಕೊಂಡಿರುವ ಅದೃಷ್ಟವೂ ಅಲ್ಲ. ಸ್ಥೂಲವಾಗಿ ನುಡಿದಲ್ಲಿ ಅದೊಂದು ಬಗೆಯ ವಿಧಿ. ಅದಾವುದೆಂದು ಒಂದೇ ಮಾತಿನಲ್ಲಿ ನಿಷ್ಕೃಷ್ಟವಾಗಿ ಹೇಳಲಾಗದಿದ್ದರೂ, ಅದರ ಸ್ವಭಾವದ ಬಾಹ್ಯ ರೇಖೆಗಳನ್ನು ಗ್ರಹಿಸುವುದು ಅಷ್ಟೇನೂ ಕಷ್ಟವಲ್ಲ. ಪುಣ್ಯದ ಕಡೆಗೇ ಆ ಬಲದ ನಿಶ್ಶಂಕೆಯ ಒಲವು; ಪಾಪವನ್ನು ಕಂಡರೆ ಅದಕ್ಕೆ ಮಿತಿಯಿಲ್ಲದ ರೋಷ. ಜಗಳಗಂಟಿಯೂ, ದುಃಖಬೀಜವೂ, ತನ್ನ ನೈಸರ್ಗಿಕತೆಗೆ ವಿರೋಧವೂ ಆದ ಪಾಪವನ್ನು ತನ್ನ ಗಡಿಯೊಳಕ್ಕೆ ಹೇಗೆ, ಯಾವಾಗ ಅದು ಒಸಗೊಡಿಸಿತೋ ಪರಮಾತ್ಮನಿಗೇ ಗೊತ್ತು. ಅಂತು ಆ ಕಾಡಿಗೆಯ ಬಣ್ಣದ ಅನ್ಯಾಯದ ಪ್ರಾಚುರ್ಯದಿಂದ ಅದರ ಜಿಳಿಯ ಒಟ್ಟೆ ಕಪ್ಪು ಕಪ್ಪು, ಅದರ ಊಟದ ರುಚಿ ಕಹಿ ಕಹಿ. ಅನವರತವೂ ಗೋಚರಕ್ಕೆ ಬಾರದ ಕಿರುಕುಳವನ್ನು ಕೊಡುತ್ತಿದ್ದು, ಪಾಪವು ಆಗಾಗ್ಗೆ ಉಲ್ಬಣವಾಗಿ, ವಿಶೇಷ ಹಾವಳಿ ಮಾಡಿ, ತನ್ನ ಹೇಯ ಲಯವ್ಯಸನದಲ್ಲಿ ತಾನೇತಾನಾಗಿ, ಮಾರಣಗೀತವನ್ನು ಹಾಡುತ್ತ ಅಟ್ಟಹಾಸಗೈಯುವುದು ಆಗ ಧರ್ಮ ಚಟುವಟಿಕೆಯು ವ್ಯಗ್ರತೆಯಿಂದೆದ್ದು ಸೊಂಟಕಟ್ಟಿ, ರಾಷ್ಟ್ರಪವಿತ್ರತೆಯನ್ನು ಪಾಲಿಸಲೋಸುಗ ಕರ್ಮಕ್ಷೇತ್ರಕ್ಕಿಳಿದು, ಸ್ಥಿರಮನಸ್ಸಿನಿಂದಲೂ ಅಪಾರ

ವೀರ್ಯದಿಂದಲೂ ತುಮುಲ ಕಾಳಗವನ್ನೆಸಗಿ, ಇದಿರಿಗೆ ಸಿಕ್ಕಿದ್ದನ್ನು ತುಂಡು ತುಂಡಾಗಿ ಕತ್ತರಿಸಿ ದಂಗೆಯನ್ನಡಗಿಸುವುದು. ಶತ್ರುವಾದ ಪಾಪವನ್ನು ಗೆಲ್ಲುವ ಏಕಾಗ್ರತೆಯಲ್ಲಿ ಮಿತ್ರತ್ವದ ಪುಣ್ಯಕ್ಕೂ ತಟ್ಟುವ ಅಪಾಯವು ಅದರ ಜಾಗ್ರತೆಗೆ ಬಾಹ್ಯ. ಆದ್ದರಿಂದ ಸಿಡಿಲಿನಂತೆ ಅದು ಬಡಿಯುವಾಗ ಅನೇಕ ಸಮ್ಯಜೀವಿಗಳೂ ಆಹತವಾಗುವುವು. ಇಯಾಗೋ, ಎಡ್ಮಂಡ್, ಗಾನರಿಲ್, ರೀಗನ್, ಮೆಕ್‌ಬೆತ್, ಕ್ಲಾಡಿಯಸ್, ರಿಚರ್ಡ್, ಮೂಂಟೆಗ್ಯು-ಕ್ಯಾಪುಲೆಟ್ಟರ ಸ್ವಯೂಥ ಕಲಹ, ಆಂಟೊನಿಯ ವಿಷಯ ಲಂಪಟತ್ವ, ಕೋರಿಯೊಲೇನಸ್ಸನ ಸ್ವದೇಶ ದ್ರೋಹ—ಮುಂತಾದ ನರಶಾರ್ದೂಲಗಳನ್ನೂ ಪೈಶಾಚಿಕ ಮನೋವೃತ್ತಿಗಳನ್ನೂ ಮೆಟ್ಟಿ ಧ್ವಂಸ ಮಾಡುವುದು ಮಂಗಳಕರ. ಅವೇನು ಸಾಧಾರಣ ಪ್ರತಾಪದವೇ? ಸ್ವಶಕ್ತಿಯೇ ಅಲ್ಲದೆ, ಯುಗಯುಗದಲ್ಲಿಯೂ ವೃದ್ಧಿಹೊಂದಿ ಮನುಷ್ಯ ಸಹಸ್ರವನ್ನೂ ಜನಾಂಗ ಶತಕವನ್ನೂ ತಿಂದು ತೇಗಿದ ಆಸುರೀ ಚೈತನ್ಯಗಳ ವಾಸನೆಯಿಂದಲೂ ಹಿಗ್ಗಿ ದೊಡ್ಡಸ್ತಿಕೆಯನ್ನು ಗಳಿಸಿದವು! ಅವನ್ನು ಕಾಲಕೆಳಗೆ ಅದಿಮಿ ತುಳಿಯಲು, ಮಹಾ ಭಾರತದಲ್ಲಾದಂತೆ ಭೀಕರವಾದ ದಂಡಪದ್ಧತಿಯಲ್ಲದೆ ಬೇರೆ ಉಪಾಯವಿಲ್ಲ. ಆ ಸಮರದ ಕಾರ್ಗತ್ತಲೆಯಲ್ಲಿ ಹಿತಾಹಿತ ವಿವೇಕಕ್ಕೆ ಬೆಳಕು ಸಾಲದು. ಆದ್ದರಿಂದ ಲಿಯರ್, ಒಥೆಲೋ, ಹ್ಯಾಮ್ಲೆಟ್ ಆದಿಯಾದ ಪುರುಷರ್ಷಭರೂ, ಏನೂ ತಿಳಿಯದ ಯಾವ ತಪ್ಪೂ ಇಲ್ಲದ ಕಾರ್ಡಿಲಿಯ, ಲೇಡಿ ಮೆಕ್‌ಡಫ್, ಒಫೀಲಿಯ, ಡೆಸ್ಡಿಮೋನರಂಥಾ ರಮಣೀ ರತ್ನಗಳೂ, ಕೊನೆಗೆ ಮುದ್ದಿನ ಬಾಲಕರೂ ಕೂಡ ಆ ರಣಕೊಯ್ಲಿಗೆ ತುತ್ತಾಗುವರು. ಗಭೀರ ಹೃದಯವನ್ನು ತಳಮೇಲಾಗಿ ಕಲಕಿರುವ ಉಗ್ರಾವಸರದಲ್ಲಿ ಲಕ್ಷಿಸಲೂ ರಕ್ಷಿಸಲೂ ಸಮಯವುಂಟೆ? ಷೇಕ್ಸ್‌ಪಿಯರಿನ ರುದ್ರನಾಟಕವೊಂದೊಂದೂ ಈ ರೀತಿ ಕೋಲಾಹಲದಲ್ಲಿ ಜರುಗುವ ಒಂದೊಂದು ಸಂಗ್ರಾಮ.

ಆ ಮಹಾ ನಾಟಕಗಳ ಅದ್ಭುತ ಪ್ರಭೆಯನ್ನು ಬಣ್ಣಿಸೋಣವೆಂದರೆ ಭಾಷೆ ಬೆಂಗೊಂಟ್ಟೋಡುವುದು. ಅವನ್ನು ಉಚಿತರೀತಿಯಲ್ಲಿ ಅಭಿನಯಿಸುವುದು ಮೇಧಾವಿಯಾದ ನಟರನ್ನು ಅತಿಕ್ರಮಿಸಿದುದೆಂದು ಕೆಲವು

ಭಾಷ್ಯಕಾರರು ಸಾರಿ ಹೇಳಿದ್ದಾರೆ. ಷೇಕ್ಸ್‌ಪಿಯರನ ಮುಖ್ಯ ಪಾತ್ರಗಳನ್ನು ಅಭಿನಯಿಸುವುದು ಪ್ರತಿಯೊಬ್ಬ ಪ್ರಸಿದ್ಧ ನಟನಿಗೂ ಹೆಬ್ಬಯಕೆಯೇ ಆಗಿದೆ. ನೋಡಿದರೂ ಓದಿದರೂ ಸಾಮಾಜಿಕರ ಆಂತರ್ಯದಲ್ಲಿ ಪ್ರಚಂಡ ಭಯವು ಉತ್ಪನ್ನವಾಗುವುದು, ಒರ್ವ ಸ್ತ್ರೀಯು ಮೆಕ್‌ಬೆತ್ ನಾಟಕವನ್ನು ರಾತ್ರಿ ಓದುತ್ತಿದ್ದು ಮಲಗಲು, ಮಹಡಿಯ ಮೆಟ್ಟಲನ್ನು ಹತ್ತಿ ಹೋಗುವಾಗ, ಭೂತಗಳು ಹಿಂದೆ ಬಂದು ತನ್ನ ಉಡುಪನ್ನು ಎಳದಂತೆ ಅನುಭವವಾಗಿ ಬೆದರಿದಳಂತೆ! ಶೋಕದ ಪ್ರವಾಹವು ದಡವನ್ನು ಕೊಚ್ಚಿ ಹರಿಯುವುದು. ನಾಟಕಾಂತ್ಯದಲ್ಲಿ ಅವಸಾನ ನಷ್ಟಗಳು ಗುರುವೆನಿಸಿ ತೋರಿ ಮನಸ್ಸು ಸ್ತಿಮಿತಕ್ಕೆ ಬರುವುದೇ ಅಸದಳವಾಗುತ್ತದೆ. ಆ ಇಳೆಯ ಮಾದರಿಗಳು ಮುರಿದುಹೋದ ತರುವಾಯ ಉಳಿದದ್ದೇನು? ಉಳಿದದ್ದಕ್ಕೆ ಏನಾದರೂ ಬೆಲೆಯುಂಟೆ? ಹ್ಯಾಮ್ಲೆಟ್ಟಾದ ಮೇಲೆ ಫಾರ್ಟಿನ್‌ಬ್ರಾಸನೇ, ಒಥೆಲೋವಿನ ಜಾಗಕ್ಕೆ ಕ್ಯಾಸಿಯೋವೆ? ಎಂದಂದುಕೊಂಡು ಸಿಟ್ಟುಸುರುಗರೆಯುತ್ತೇವೆ. ಆದರೂ ಷೇಕ್ಸ್‌ಪಿಯರನ ನಾಟಕಗಳು ಕೇವಲ ಹತಾಶೆಯಲ್ಲಿ, ಭಗ್ನಹೃದಯದ ಧೂಳಿನಲ್ಲಿ, ನಮ್ಮನ್ನು ದೂಡಿ ಮುಕ್ತಾಯಗೊಳ್ಳುವುದಿಲ್ಲ. ಪೂರ್ವರಂಗದ ಸ್ಮರಣೆಯನ್ನು ಎಬ್ಬಿಸಿ ನಾಯಕರ ಭವ್ಯವ್ಯಕ್ತಿತ್ವವನ್ನು ಮುಂದಿಟ್ಟು, ಆಶ್ಚರ್ಯ ಅಭಿಮಾನಗಳನ್ನು ನಮ್ಮಲ್ಲಿ ಹುಟ್ಟಿಸುತ್ತವೆ. ಸತ್ತರೇನು, ಆ ಸಿಂಹಗಳಿಗೆ ಸಾವೊಂದು ನೋವೆ? ನರಕವನ್ನು ಹೀಯಾಳಿಸುವ ಯಾತನಾ ಸಮೂಹವನ್ನು ಧೈರ್ಯದಿಂದ ಪ್ರತಿಭಟಿಸಿ, ಕೊಂತದ ಪೆಟ್ಟುಗಳು ತಮ್ಮನ್ನು ಜಜ್ಜಿದರೂ ತಲೆತಗ್ಗಿಸದೆ, ಮನುಷ್ಯತ್ವದ ದಿವ್ಯಪರಾಕ್ರಮವನ್ನು ಮೆರೆದ ಧೀರರು! ಮನುಷ್ಯ ಹೆಚ್ಚೇ ಹೊರತು ವಿಷಾದವಲ್ಲವೆಂಬ ಸಮರ್ಪಕ ತತ್ತ್ವವನ್ನು ತಮ್ಮ ಸ್ವಯಂಪ್ರಕಾಶದಿಂದ ಸಿದ್ಧಾಂತಮಾಡಿದ ಜ್ಯೋತಿಗಳು! ಅಂದಮೇಲೆ ಅವರ ಕಳೆಗೆ ಕುಂದುಂಟೇ? ಅದರ ಆದರ್ಶ ಚರಿತ್ರೆಯನ್ನು ಮನನಮಾಡುವ ನಾವು ಅಳುತ್ತ ನಿಲ್ಲುವ ಸಂಭವವಿದೆಯೇ?

ಷೇಕ್ಸ್‌ಪಿಯರನ ವಸ್ತುಸಂವಿಧಾನ ಪ್ರತಿಭೆಯ ವಿವಿಧ ಚಾತುರ್ಯ, ರೂಪಕಕಲಾವೈಶಿಷ್ಟ್ಯದ ಹತ್ತೆಂಟು ಬೆಡಗುಗಳು, ನೇಪಥ್ಯಕ್ಕನುರೂಪವಾದ ನೂರಾರು ದೃಶ್ಯ ಚಮತ್ಕಾರಗಳು, ಶೈಲಿಯ ಸ್ವಚ್ಛಂದ ತಾಂಡವಲಾಸ್ಯಗಳು

ಇವುಗಳ ವಿಚಾರವಾಗಿ ಈ ಮುನ್ನುಡಿಯಲ್ಲಿ ಚರ್ಚಿಸುವುದು ಅಪ್ರಕೃತ. ಆ ಉದ್ಘಕೃತಿಗಳನ್ನು ನಾಟಕ ಮಂದಿರದಲ್ಲಿ ಪ್ರೇಕ್ಷಿಸಬೇಕು; ಇಲ್ಲದಿದ್ದರೆ ಸಮಂಜಸ ಭಾಷಾಂತರದಲ್ಲಾದರೂ ಓದಬೇಕು, ಕಟ್ಟಕಡೆಗೆ ಈತರದ ಸರಳಗದ್ಯಾನುವಾದದ ಮೂಲಕ ಕವಿಪುಂಗವನ ಮಹಾವಸ್ತುವಿನ ಸ್ವಲ್ಪ ಪರಿಚಯವನ್ನಾದರೂ ಲಭಿಸಿಕೊಳ್ಳದಿದ್ದರೆ ಜನ್ಮವು ವ್ಯರ್ಥ.

ಎಸ್. ವಿ. ರಂಗಣ್ಣ.

# ಹ್ಯಾಮ್ಲೆಟ್

---

ಡೆನ್‌ಮಾರ್ಕಿನ ರಾಣಿಯಾದ ಗರ್ಟ್ರೂಡಳು ತನ್ನ ಪತಿಯ ಅನಿರೀಕ್ಷಿತವಾದ ಮರಣದಿಂದ ವಿಧವೆಯಾದಳು. ಆದರೂ ಪತಿಯು ಗತಿಸಿ ಹೋದ ಎರಡು ತಿಂಗಳೊಳಗಾಗಿಯೇ ಆತನ ಸಹೋದರನಾದ ಕ್ಲಾಡಿಯಸ್ಸನ್ನು ಮದುವೆಯಾದಳು. ಗುಣದಲ್ಲಿಯೂ ರೂಪದಲ್ಲಿಯೂ ಇವಳ ಹಿಂದಿನ ಪತಿಯು ಎಷ್ಟು ಉತ್ಕೃಷ್ಟನೆನಿಸಿದ್ದನೋ ಈಗಿನ ಪತಿಯು ಅಷ್ಟು ನಿಕೃಷ್ಟನು. ಅದರಿಂದ ಈ ವಿವಾಹವನ್ನು ಆಗಿನ ಜನರು ತಿಳಿಗೇಡಿತನದ ಅಥವಾ ಕಠಿನ ಮನಸ್ಸಿನ ಅಥವಾ ಅದಕ್ಕಿಂತ ಕೀಳಾದ ವಿಚಿತ್ರಕಾರ್ಯವೆಂದು ಎಣಿಸಿದ್ದರು. ಅಲ್ಲದೆ ಕ್ಲಾಡಿಯಸ್ಸನು ತನ್ನ ಅಣ್ಣನ ಹೆಂಡತಿಯನ್ನು ಮದುವೆಯಾಗಬೇಕಂದೂ ಸಿಂಹಾಸನಕ್ಕೆ ನ್ಯಾಯವಾಗಿ ಉತ್ತರಾಧಿಕಾರಿಯಾಗಿದ್ದ ತನ್ನ ಅಣ್ಣನ ಮಗನಿಗೆ ಸಿಂಹಾಸನವು ದೊರೆಯದಂತೆ ಮಾಡಿ ಅದನ್ನು ತಾನು ಪಡೆಯಬೇಕೆಂದೂ, ಗೋಪ್ಯವಾಗಿ ಅಣ್ಣನನ್ನು ಸಂಹರಿಸಿಬಿಟ್ಟನೆಂದು ಜನರು ಸಂದೇಹಗೊಂಡರು.

ಆದರೆ ರಾಣಿಯ ಈ ಅವಿವೇಕದಿಂದ, ತಂದೆಯೆಂದರೆ ದೇವರಂತೆ ಪೂಜಿಸುತ್ತ, ಸ್ವತಃ ಗೌರವಶಾಲಿಯೂ ಗುಣಶಾಲಿಯೂ ಆಗಿದ್ದ ಯುವರಾಜನ ಮನಸ್ಸಿಗೆ ಬಹು ಚಿಂತೆಯುಂಟಾಯಿತು. ಪಿತೃಶೋಕವೂ, ಮಾತೃವಿನ ಪುನರ್ವಿವಾಹವೂ ಒಂದಕ್ಕಿಂತ ಒಂದು ತೀವ್ರವಾಗಿ ಅವನಿಗೆ ಅತ್ಯಂತ ದುಃಖವನ್ನುಂಟುಮಾಡಿದುವು. ಚಿಂತೆಯೆಂಬ ಕಾರ್ಮುಗಿಲು ಅವನ ಮನಸ್ಸನ್ನು ಮುಸುಕಿ, ಸಂತೋಷದ ಮುಖಭಾವವೂ ನೋಟವೂ ಅದೃಶ್ಯವಾದುವು. ರೂಢಿಯಾಗಿ ಬಂದ ಗ್ರಂಥ ಕಾಲಕ್ಷೇಪವು ಲುಪ್ತವಾಯಿತು. ರಾಜಧರ್ಮಕ್ಕೂ ತನ್ನ ವಯಸ್ಸಿಗೂ ತಕ್ಕುವಾದ ವ್ಯಾಯಾಮ ವಿನೋದಾದಿಗಳು ಬೇಡವಾದುವು. ಪ್ರಪಂಚವು ಕಳೆಬೆಳೆದು ಮುಚ್ಚಿಹೋದ ಪುಷ್ಪೋದ್ಯಾನದಂತೆ ತೋರುತ್ತ ಬೇಸರವನ್ನುಂಟುಮಾಡುತ್ತಿತ್ತು.

ಗರ್ಟ್ರೂಡಳು ತನ್ನನ್ನು ಪ್ರಾಣಾಧಿಕಳೆಂದು ಪ್ರೀತಿಸುತ್ತಿದ್ದ ಪತಿಯನ್ನು ತಾನೂ ಮಿಗಿಲಾಗಿ ಪ್ರೀತಿಸುತ್ತಿದ್ದಂತೆಯೂ ಅವನಿಗೆ ವಿಧೇಯಳಾಗಿದ್ದಂತೆಯೂ ಕಾಣಿಸುತ್ತಿದ್ದರೂ, ಅವಳು ಪತಿಯನ್ನು ಅಷ್ಟು ಜಾಗ್ರತೆಯಾಗಿ ಮರೆತುಬಿಟ್ಟುದೂ, ಪತಿಯು ಮೃತನಾದ ಎರಡು ತಿಂಗಳೊಳಗಾಗಿಯೇ, ಅಥವಾ ರಾಜಕುವರನಿಗೆ ಇನ್ನೂ ನಿನ್ನೆ ಮೊನ್ನೆ ತಂದೆಯು ಮೃತನಾದಂತೆ ಕಾಣುತ್ತಿದ್ದ ಆ ಕಾಲದಲ್ಲಿಯೇ, ಮತ್ತೆ ಮದುವೆಯಾದುದೂ, ಅವನಿಗೆ ಬಹು ಸಂತಾಪಕಾರಣವಾಯಿತು. ಸಮೀಪಬಾಂಧವ್ಯವಾಗಿ ನ್ಯಾಯವಿರುದ್ಧವಾದ ಈ ವಿವಾಹಕ್ಕಾಗಿಯೂ, ರಾಜಾರ್ಹವಾದ ನಡತೆಯಿಲ್ಲದ ತುಚ್ಛ ಮನುಷ್ಯನನ್ನು ತನಗೂ ಸಿಂಹಾಸನಕ್ಕೂ ಸ್ವಾಮಿಯನ್ನಾಗಿ ಮಾಡಿಕೊಂಡುದಕ್ಕಾಗಿಯೂ, ರಾಜಕುವರನಿಗೆ ನ್ಯಾಯವಾಗಿ ಬರಬೇಕಾಗಿದ್ದ ಸಿಂಹಾಸನದ ಬಾಧ್ಯತೆಯು ತಪ್ಪಿಹೋದದ್ದರಿಂದ ಉಂಟಾದ ಹೃದಯ ವೇದನೆಗಿಂತಲೂ ಅತ್ಯಧಿಕವಾದ ಸಂತಾಪವುಂಟಾಯಿತು ಈ ದುಃಖವು ಇವನ ಸಂತೋಷಸ್ವಭಾವವನ್ನು ಮಂಕುಮಾಡಿತು, ಸರಿಯಾಗಿ ನೋಡಿದರೆ ಹತ್ತು ರಾಜ್ಯಗಳನ್ನು ಕಳೆದುಕೊಳ್ಳುವುದರಿಂದುಂಟಾಗುವ ದುಃಖಕ್ಕಿಂತಲೂ ಈ ದುಃಖವು ಹೆಚ್ಚಾಗಿ ಅವನ ಮನಸ್ಸನ್ನು ಕುಗ್ಗಿಸಿ ಅವನನ್ನು ತೇಜೋಹೀನನನ್ನಾಗಿ ಮಾಡಿತು. ಹೊಸ ಅರಸನೂ, ಅರಸಿತಿಯೂ ಇವನಿಗೆ ದುಃಖ ಮರೆಯುವಂತೆ ಮಾಡಬೇಕೆಂದು ಹಲವು ಪ್ರಯತ್ನಗಳನ್ನು ಮಾಡಿದರೂ ಅವು ವಿಫಲವಾದುವು ರಾಜಸಭೆಯಲ್ಲಿ ಇವನು ತಂದೆಯ ಮರಣದಿಂದುಂಟಾದ ದುಃಖಸೂಚಕವಾದ ಕಪ್ಪು ಉಡಿಗೆಯಲ್ಲಿರುವನು ಅದನ್ನು ಎಂದೂ ತೆಗೆದುಹಾಕಲಿಲ್ಲ ತಾಯಿಯ ಪುನರ್ವಿವಾಹದ ದಿನದಲ್ಲಿಯೂ, ಇನ್ನೂ ಕೆಲವು ಉತ್ಸವಗಳು ನಡೆದ ದಿನಗಳಲ್ಲಿಯೂ ಇವನು ಆ ಉಡಿಗೆಯನ್ನು ತೆಗೆದುಹಾಕಲಿಲ್ಲ ಇವನು ಹೇಗೆ ತಾನೇ ಆ ದಿನಗಳನ್ನು ಶೋಕದಿನಗಳೆಂದು ಭಾವಿಸದೆ ಸಂತೋಷದಿನಗಳೆಂದು ಭಾವಿಸಿಯಾನು ! ಅಲ್ಲದೆ, ತನ್ನ ತಂದೆಯ ಮರಣಕಾರಣವು ತಿಳಿಯದೇ ಇದ್ದುದೇ ರಾಜಕುವರನ ವಿಶೇಷ ಚಿಂತೆಗೆ ಕಾರಣವಾಯಿತು. ಅವನು ಹಾವಿನಿಂದ ಸತ್ತಂತೆ ಕ್ಲಾಡಿಯಸ್ಸನು ಹೇಳಿದನು. ಸಿಂಹಾಸನ

ಕ್ಕಾಗಿ ಅಣ್ಣನನ್ನು ಕೊಂದು, ಈಗ ಸಿಂಹಾಸನದ ಮೇಲೆ ಕುಳಿತಿರುವ ಅವನೇ ಆ ಕಾಳೋರಗನೆಂಬ ಸಂಶಯವು ಮಾತ್ರ ಹ್ಯಾಮ್ಲೆಟ್ ರಾಜ ಕುವರನಿಗೆ ಪ್ರಬಲವಾಗಿತ್ತು.

ಎಷ್ಟುಮಟ್ಟಿಗೆ ತನ್ನ ಸಂಶಯವು ನಿಜವಾದುದು? ತನ್ನ ತಾಯಿಯು ಈ ಕೊಲೆಯಲ್ಲಿ ಭಾಗಿಯಾಗಿರುವಳೇ? ಅವಳಿಗೆ ತಿಳಿದು ಈ ಕೊಲೆಯು ನಡೆಯಿತೆ? ಎಂಬೀ ಸಂಗತಿಗಳು ರಾಜಕುವರನ ಮನಸ್ಸನ್ನು ಸರ್ವದಾ ಪೀಡಿಸುತ್ತಿದ್ದುವು. ಮೃತನಾದ ಅರಸಿನ ರೂಪವುಳ್ಳ ಒಂದು ಭೂತವು ರಾತ್ರಿಕಾಲದಲ್ಲಿ ಎರಡು ಮೂರು ಸಲ ಅರಮನೆಯ ಮುಂಭಾಗದ ಪಹರಯವರಿಗೆ ಗೋಚರವಾಯಿತೆಂಬ ವದಂತಿಯು ಈ ರಾಜಕುವರನ ಕಿವಿಗೆ ಬಿದ್ದಿತು. ಆ ಮೃತನಾದ ಅರಸನು ಹಿಂದೆ ಸಾಮಾನ್ಯವಾಗಿ ಆಪಾದಮಸ್ತಕವಾಗಿ ಯಾವ ಉಡಿಗೆತೊಡಿಗೆಗಳಿಂದಿರುತ್ತಿದ್ದನೋ ಅದೇ ಉಡಿಗೆತೊಡಿಗೆಗಳಿಂದಲೇ ಈಗ ಆ ಮೂರ್ತಿಯೂ ಗೋಚರವಾಗುತ್ತಿತ್ತು. ಇದನ್ನು ನೋಡಿದವರು ಆ ಭೂತ ಬರುವ ಕಾಲಕ್ರಮಗಳನ್ನು ಕುರಿತೂ ಒಂದೇ ವಿಧವಾಗಿ ಹೇಳುತ್ತಿದ್ದರು. ಹಾಗೆ ನೋಡಿದವರಲ್ಲಿ ಹ್ಯಾಮ್ಲೆಟಿನ ಸ್ನೇಹಿತನಾದ ಹೊರೇಷಿಯೋವೂ ಒಬ್ಬನು. ಅವರು—"ಅದು ರಾತ್ರಿ ಹನ್ನೆರಡು ಗಂಟೆಗೆ ಬರುವುದು ರೂಪದಲ್ಲಿ ಕಂಗೆಟ್ಟಂತೆ ತೋರುವುದು. ಮುಖವು ಆಗ್ರಹಕ್ಕಿಂತಲೂ ಹೆಚ್ಚಾಗಿ ದುಃಖವನ್ನು ಸೂಚಿಸುವಂತೆ ಕಾಣುವುದು. ಗಡ್ಡವು ಮುಪ್ಪಿನ ಗಡ್ಡದಂತೆ, ಕಂದುಬೆಳ್ಳಿಯ ಹಾಗಿರುವುದು. ನಾವು ಮಾತನಾಡಿಸಿದರೂ ಅದು ಮಾತನಾಡಲಿಲ್ಲ. ಆದರೂ ತಲೆಯನ್ನು ಎತ್ತಿ ಮಾತನಾಡತೊಡಗುವುದೋ ಎನ್ನುವಂತೆ ಇತ್ತು. ಆದರೆ ಅಷ್ಟರಲ್ಲಿಯೇ ಬೆಳಗಿನ ಜಾವದ ಕೋಳಿ ಕೂಗಲು, ಅದು ಆತುರದಿಂದ ಅದೃಶ್ಯವಾಯಿತು" ಎಂದು ಹೇಳಿದರು.

ರಾಜಕುವರನು ಕಾವಲುಗಾರರು ಹೇಳಿದ ಈ ಮಾತುಗಳನ್ನು ಕೇಳಿ, ಅಪನಂಬಿಕೆಪಡಲಾರದೆ, ಆಶ್ಚರ್ಯಭರಿತನಾಗಿ ಅವರು ನೋಡಿದ ವ್ಯಕ್ತಿಯು ತನ್ನ ತಂದೆಯ ಭೂತವೆಂದೇ ನಿಷ್ಕರ್ಷೆಮಾಡಿಕೊಂಡನು. ಈ ಭೂತವು ಅನಾವಶ್ಯಕವಾಗಿ ಗೋಚರವಾಗಲು ಕಾರಣವಿಲ್ಲವೆಂತಲೂ ಏನೋ

ಸಮಾಚಾರವಿರಬಹುದೆಂಬುದಾಗಿಯೂ ಈವರೆಗೆ ಸುಮ್ಮನಿದ್ದರೂ ತನ್ನೊಡನೆ ಮಾತನಾಡಬಹುದೆಂತಲೂ ಯೋಚಿಸಿ, ಅದನ್ನು ನೋಡಲೆಳಸಿ, ಆ ರಾತ್ರಿ ಕಾವಲುಗಾರರ ಜೊತೆಯಲ್ಲಿ ತಾನೂ ಕಾವಲಿರಲು ಯೋಚಿಸಿಕೊಂಡನು. ಅದರಂತೆಯೇ ಅವನು ರಾತ್ರಿಯಾಗುವುದನ್ನೇ ಬಹು ಆತುರದಿಂದ ನಿರೀಕ್ಷಿಸುತ್ತಿದ್ದನು. ರಾತ್ರಿಯೂ ಆಯಿತು. ಹೊರೇಷಿಯೋ ಮತ್ತು ಮಾರ್ಸೆಲಸ್‌ರ ಜತೆಯಲ್ಲಿ ರಾಜಕುವರನು ಆ ಭೂತವು ಸಂಚರಿಸುತ್ತಿದ್ದ ಅರಮನೆಯ ಮುಂದೆ ಕಾವಲಿರಲು ಹೊರಟನು. ರಾತ್ರಿಯು ಬಹು ಚಳಿಯಾಗಿತ್ತು. ಗಾಳಿಯು ಚಿಲ್ಲನೆ ಬೀಸುತ್ತಿತ್ತು. ಆ ಚಳಿಯ ವಿಷಯವಾಗಿ ಇವರು ಮಾತನಾಡುತ್ತಿರಲು ಹೊರೇಷಿಯೋವು ಆ ಭೂತದ ಬರುವಿಕೆಯನ್ನು ತಿಳಿಸಿದನು. ಅಷ್ಟರಲ್ಲಿಯೇ ಎಲ್ಲರೂ ನಿಶ್ಶಬ್ದರಾದರು. ತಂದೆಯ ಭೂತವನ್ನು ನೋಡಿದುದರಿಂದ ರಾಜಕುವರನಿಗೆ ತಟ್ಟನೆ ಭಯವೂ ಆಶ್ಚರ್ಯವೂ ಉಂಟಾದುವು. ಅವನಿಗೆ ಆ ಭೂತವು ಒಳ್ಳೆಯದೋ ಕೆಟ್ಟದೋ ಎಂಬುದಾಗಲಿ, ಅದು ಒಳ್ಳೆಯ ಉದ್ದೇಶದಿಂದ ಬಂದಿದೆಯೋ ಕೆಟ್ಟ ಉದ್ದೇಶದಿಂದ ಬಂದಿದೆಯೋ ಎಂಬುದಾಗಲಿ, ಗೊತ್ತಿರಲಿಲ್ಲವಾದುದರಿಂದ ಆಶ್ಚರ್ಯಕ್ಕಿಂತಲೂ ಭಯವು ಹೆಚ್ಚಿತು ಅದನ್ನು ಓಡಿಸುವಂತೆ ದೇವತೆಗಳನ್ನೂ ದೇವದೂತರನ್ನೂ ಪ್ರಾರ್ಥಿಸಿದನು ಆದರೂ ಜಾಗ್ರತೆಯಾಗಿಯೇ ಧೈರ್ಯವನ್ನು ತಂದುಕೊಂಡನು. ಈಗ ಪ್ರೇತರೂಪವಾಗಿದ್ದ ತಂದೆಯು ಮಗನನ್ನು ಬಹು ಕನಿಕರದಿಂದ ನೋಡಿದನು ಜೀವಿತನಾಗಿದ್ದಾಗ್ಗೆ ತಂದೆಯು ಮಗನನ್ನು ಹೇಗೆ ನೋಡುತ್ತಿದ್ದನೋ ಈಗಲೂ ಹಾಗೆಯೇ ನೋಡಿದನು, ಮಾತನಾಡುವ ಉದ್ದೇಶವುಳ್ಳಂತೆ ಬೋಧೆಯಾಯಿತು. ಆದುದರಿಂದ ರಾಜಕುವರನಿಗೆ ಮಾತನಾಡದೆ ಇರಲಾಗಲಿಲ್ಲ "ತಂದೆಯೇ, ಓ! ಪ್ರಭುವೇ," ಎಂದು ಮಾತಿಗೆ ಮೊದಲಿಟ್ಟು, ಅವನು ಸಮಾಧಿಸ್ಥಳವನ್ನು ಏಕೆ ಬಿಟ್ಟು ಬಂದನೆಂಬುದನ್ನೂ, ಏತಕ್ಕಾಗಿ ಭೂಮಿಯನ್ನೂ ಬೆಳದಿಂಗಳನ್ನೂ ನೋಡಲೆಳಸಿರುವನೆಂಬುದನ್ನೂ, ಅವನ ಆತ್ಮಕ್ಕೆ ಹಿತವಾಗುವಂತೆ ತಾವು ಏನು ಮಾಡಬಹುದೆಂಬುದನ್ನೂ ತಿಳಿಸಬೇಕೆಂದು ಕೇಳಿದನು. ಆಗ ಆ ಭೂತವು ಹ್ಯಾಮ್ಲೆಟನನ್ನು ಕರೆದು ಒಂದು ನಿರ್ಜನಪ್ರದೇಶಕ್ಕೆ ಬರಬೇಕೆಂದು

ಸೂಚಿಸಿತು. ಆದರೆ ಹೊರೇಷಿಯೋವೂ, ಮಾರ್ಸೆಲಸ್‌ನೂ, ಆ ಭೂತವು ದುಷ್ಟಭೂತವಾಗಿದ್ದು ರಾಜಕುವರನನ್ನು ಸಮೀಪದ ಸಮುದ್ರ ತೀರಕ್ಕೋ ಅಥವಾ ಎತ್ತರವಾದ ಪರ್ವತ ಶಿಖರಕ್ಕೋ ಕರೆದೊಯ್ದು ಅಲ್ಲಿ ಅವನ ಬುದ್ಧಿ ಪಲ್ಲಟ ಮಾಡಿಬಿಡಬಹುದೋ ಎಂದು ಹೆದರಿ, ಅವನನ್ನು ಅದರ ಜತೆಯಲ್ಲಿ ಹೋಗದಿರುವಂತೆ ಮಾಡಬೇಕೆಂದು ಪ್ರಯತ್ನಿಸಿದರು. ಆದರೆ ರಾಜಕುವರನಿಗೆ ಜೀವದ ಮೇಲೆ ಆಸೆಯಿರಲಿಲ್ಲ "ಅಲ್ಲದೆ ಆತ್ಮವು ನಿತ್ಯ. ಅದನ್ನು ಈ ಭೂತವು ಏನು ಮಾಡೀತು?" ಎಂದುಕೊಳ್ಳುತ್ತ ಧೀರನಾದ ರಾಜಕುವರನು ಇವರ ಮಾತಿಗೆ ಕಿವಿಗೊಡದೆ, ಆ ಭೂತವು ತನ್ನನ್ನು ಕರೆದುಕೊಂಡು ಹೋದ ಹೋದ ಕಡೆಗೆಲ್ಲಾ ಸಿಂಹದಂತೆ ನುಗ್ಗಿದನು. ಭೂತವಾಗಿರುವ ತಂದೆಯೂ ಮಗನೂ ವಿಜನವಾದ ಸ್ಥಳವನ್ನು ತಲಪುತ್ತಲೇ, ಭೂತವು ಮಾತನಾಡತೊಡಗಿತು. "ಮಗು! ನಾನು ನಿನ್ನ ತಂದೆ. ನನ್ನ ಸಹೋದರನಾದ ಕ್ಲಾಡಿಯಸ್ಸನು ನನ್ನ ಭಾರ್ಯೆಯನ್ನೂ ಸಿಂಹಾಸನವನ್ನೂ ಆಕ್ರಮಿಸಿಕೊಳ್ಳಲು ನನ್ನನ್ನು ಕೊಲೆ ಮಾಡಿದನು. (ಹೀಗೆಯೇ ನಡೆದಿರಬಹುದೆಂದು ರಾಜಕುವರನಿಗೂ ಬಲವಾದ ಸಂಶಯವಿತ್ತು.) ಪದ್ಧತಿಯ ಪ್ರಕಾರ ಒಂದು ದಿನ ಮಧ್ಯಾಹ್ನ ನಾನು ಉದ್ಯಾನವನದಲ್ಲಿ ಮಲಗಿರಲು ಘಾತುಕನಾದ ಅವನು ಅಲ್ಲಿಗೆ ಬಂದು ಮನುಷ್ಯಪ್ರಕೃತಿಗೆ ಮಹಾಕ್ರೂರವಿಷವಾದ 'ಹಬೋನ' ದ್ರವವನ್ನು ನನ್ನ ಕಿವಿಯಲ್ಲಿ ಹಿಂಡಿದನು. ಅದು ಪಾದರಸದಂತೆ ಬಹುಬೇಗನೆ ಎಲ್ಲ ರಕ್ತನಾಳಗಳಲ್ಲಿಯೂ ವ್ಯಾಪಿಸಿತು. ರಕ್ತವನ್ನು ಕುದಿಸಿ ಚರ್ಮವೆಲ್ಲಾ ಕುಷ್ಠ ಹಿಡಿದಂತೆ ಮಾಡಿತು. ಹೀಗೆ, ನಾನು ನಿದ್ರಿಸುತ್ತಿದ್ದಾಗ, ನನ್ನ ತಮ್ಮನೇ, ನನ್ನ ಪ್ರಾಣ ಪತ್ನಿ ರಾಜ್ಯಗಳನ್ನು ತಟ್ಟನೆ ಅಪಹರಿಸಿದನು. ನಿನ್ನ ತಂದೆಯ ಮೇಲೆ ನಿನಗೆ ಪ್ರೀತಿ ಇದ್ದರೆ, ನನ್ನನ್ನು ಅನ್ಯಾಯವಾಗಿ ಕೊಲೆಮಾಡಿದ ಆ ನನ್ನ ಸಹೋದರನ ಮೇಲೆ ಹಗೆ ತೀರಿಸಿಕೊಳ್ಳಲೇಬೇಕು. ಅಯ್ಯೋ! ನಿನ್ನ ಜನನಿಯು ನನ್ನನ್ನು ಕೊಲೆಮಾಡಿದವನನ್ನೇ ಮದುವೆಯಾಗುವಷ್ಟು ನೀಚಳಾಗಿ ಹೋದಳಲ್ಲಾ! ಆದರೆ ನೀನು ಪಾಪಿಯಾದ ಆ ನನ್ನ ತಮ್ಮನಮೇಲೆ ಹಗೆ ತೀರಿಸಿಕೊಳ್ಳುವಾಗ ನಿನ್ನ ತಾಯಿಗೆ ಸ್ವಲ್ಪವಾದರೂ ಬಾಧೆಯಾಗದಂತೆ ನೋಡಿಕೊ. ಅವಳಿಗೆ ದೇವರು ಕೊಡುವ

ಶಿಕ್ಷೆಯೂ, ಅವಳ ಅಂತರಂಗವು ಕೊಡುವ ಯಾತನೆಯೂ ಸಾಕಾಗಿವೆ" ಎಂದು ಹೇಳಿತು. ರಾಜಕುವರನು ಇವೆಲ್ಲವನ್ನೂ ಅವನ ಅಪ್ಪಣೆಯಂತೆ ನಡೆಸುವುದಾಗಿ ಮಾತುಕೊಡಲು ಭೂತವು ಅದೃಶ್ಯವಾಯಿತು. ಅನಂತರ ರಾಜಕುವರನು ಅದುವರೆಗೆ ತಾನು ಕಲಿತು, ಕಂಡು, ಕೇಳಿದ ಸಂಗತಿಗಳನ್ನೆಲ್ಲಾ ಮರೆತು ತನ್ನ ತಂದೆಯು ಹೇಳಿದ್ದ ಒಂದಂಶವನ್ನು ಮಾತ್ರ ಜ್ಞಾಪಕದಲ್ಲಿಟ್ಟುಕೊಳ್ಳುವುದಾಗಿ ಖಂಡಿತವಾದ ಪ್ರತಿಜ್ಞೆ ಮಾಡಿದನು. ಭೂತವು ಬಂದ ಸಂಗತಿಯನ್ನೂ, ಅದು ತನ್ನನ್ನು ಕರೆದುಕೊಂಡು ಹೋದ ಸಂಗತಿಯನ್ನೂ, ಬಹು ಗೋಪ್ಯವಾಗಿಡಬೇಕೆಂದು ಹೊರೇಷಿಯೋ ಮಾರ್ಸೆಲಸ್‌ರಿಗೆ ಹೇಳಿದನು. ಆಗ ನಡೆದ ಸಂಭಾಷಣೆಯನ್ನು ಹೊರೇಷಿಯೋವಿಗೆ ಮಾತ್ರ ಹೇಳಿದನು.

ರಾಜಕುವರನ ಮನಸ್ಸು ಮೊದಲೇ ದುರ್ಬಲವಾಗಿತ್ತು. ಪ್ರೇತ ದರ್ಶನದಿಂದ ಈಗ ಅದು ಮತ್ತೂ ದುರ್ಬಲವಾಯಿತು. ಬುದ್ಧಿಯೇ ವಿಕಲವಾದಹಾಗಾಯಿತು. ಇದು ಹೀಗೆಯೇ ಅನುಗಾಲವೂ ನಡೆದೀತೆಂದು ಅವನು ಹೆದರಿ—"ಕ್ಲಾಡಿಯಸ್ಸಿಗೆ ವಿರೋಧವಾಗಿ ನಾನು ಏನನ್ನೋ ಯೋಚಿಸುತ್ತಿರುವುದಾಗಿ, ಅಥವಾ ನನ್ನ ತಂದೆಯ ಮರಣ ಕಾರಣವು ನನಗೆ ತಿಳಿದಿರುವುದಾಗಿ, ಸಂಶಯ ಬಂದರೆ ಕ್ಲಾಡಿಯಸ್ಸನು ನನ್ನ ಮೇಲೆ ಕಾವಲು ಇಡಬಹುದು. ಆದರಿಂದ ನಾನು ದಿಟವಾಗಿ ಹುಚ್ಚುಹಿಡಿದವನಂತೆ ಕಾಣಬೇಕು. ಇದರಿಂದ ಅವನಿಗೆ ನನ್ನಿಂದ ಅಪಾಯವಾದೀತೆಂಬ ಭಯವಾಗಲಿ, ಸಂಶಯವಾಗಲಿ ಹುಟ್ಟದಿರುವುದು. ಮನಸ್ಸಿನ ನಿಜವಾದ ಬಾಧೆಯನ್ನು ಕೃತಕ ಪೈತ್ಯದಿಂದ ಮುಚ್ಚಿಕೊಳ್ಳುವುದರಿಂದ ಕ್ಷೇಮಕರವಾಗಿಯೂ ಕಾಣುವುದು" ಎಂದು ಯೋಚಿಸಿಕೊಂಡನು. ನಡೆನುಡಿಗಳಲ್ಲಿಯೂ, ವೇಷಭಾಷೆಗಳಲ್ಲಿಯೂ ಸಂಪೂರ್ಣವಾಗಿ ಹುಚ್ಚನಂತಾದನು. ರಾಜನೂ ರಾಣಿಯೂ ಇದರ ಕಾರಣವನ್ನರಿಯಲಾರದೆ ವಂಚಿತರಾದರು. ರಾಜಕುವರನು ತನ್ನ ತಂದೆಯ ಭೂತವನ್ನು ಕಂಡಿದ್ದನೆಂಬ ಸಂಗತಿಯು ಇವರಿಗೆ ತಿಳಿಯಲಿಲ್ಲ. ಆದ್ದರಿಂದ ತನ್ನ ತಂದೆಯ ಸಾವು ಈ ವಿಧವಾದ ಮನೋವಿಕಾರಕ್ಕೆ ಕಾರಣವಾಗಿರಬಹುದೆಂದು ಅವರು ಅರಿಯದವರಾದರು.

ಈ ಮನೋವಿಕಾರಕ್ಕೆ ಸ್ತ್ರೀವ್ಯಾಮೋಹವು ಕಾರಣವೆಂದು ಯೋಚಿಸಿಕೊಂಡರು.

ರಾಜಕಾರ್ಯಗಳಲ್ಲಿ ಅರಸಿಗೆ ಮುಖ್ಯ ಮಂತ್ರಿಯಾಗಿದ್ದ ಪೊಲೋನಿಯಸ್ಸನ ಮಗಳಾದ ಒಫೀಲಿಯಾ ಎಂಬ ರೂಪವತಿಯಾದ ತರುಣಿಯಲ್ಲಿ ರಾಜಕುವರನು ಇದಕ್ಕೆ ಹಿಂದೆ ಅನುರಕ್ತನಾಗಿದ್ದನು. ಅವಳಿಗೆ ಅನೇಕ ಪ್ರಣಯಪತ್ರಿಕೆಗಳನ್ನು ಬರೆದಿದ್ದನು, ಉಂಗುರಗಳನ್ನು ಕಳುಹಿಸಿದ್ದನು. ತನ್ನ ಪ್ರೀತಿಯನ್ನು ಪುರಸ್ಕರಿಸಿ, ಪರಿಗ್ರಹಿಸಬೇಕೆಂದು ಅನೇಕವೇಳೆ ಪ್ರಾರ್ಥನೆಮಾಡಿದ್ದನು. ಪ್ರೀತಿ ಪ್ರಾರ್ಥನೆಗಳಿಗೆ ಕೊನೆಮೊದಲಿಲ್ಲದ ಇವನ ಪ್ರಣಯಪ್ರತಿಜ್ಞೆಗಳನ್ನು ಆ ತರುಣಿಯೂ ಅಂಗೀಕರಿಸಿದ್ದಳು. ಆದರೆ ಈಚೆಗೆ ಇವನು ಮನೋವ್ಯಥೆಗೊಳಗಾಗಿ ಅವಳನ್ನು ಮನ್ನಿಸದೆ ಹೋದನು. ಹುಚ್ಚನಂತೆ ಕಾಣಿಸಿಕೊಳ್ಳಲು ಇವನು ಮೊದಲುಮಾಡಿದಂದಿನಿಂದ ಅವಳನ್ನು ನಿರ್ದಯೆಯಿಂದಲೋ, ಒಂದು ವಿಧವಾದ ಒರಟುತನದಿಂದಲೋ ಕಾಣುತ್ತಿರುವಂತೆ ತೋರ್ಪಡಿಸಿಕೊಂಡನು. ಆದರೆ ಆಕೆ ಅವನನ್ನು ಅನೃತವಾದಿಯೆಂದು ಭಾವಿಸದೆ, ಈ ಪ್ರಕೃತಸ್ಥಿತಿಯು ಚಿರಸ್ಥಾಯಿಯಾದ ಔದಾಸೀನ್ಯವಲ್ಲವೆಂತಲೂ, ಮನೋವ್ಯಥೆಯೇ ಇದಕ್ಕೆ ಕಾರಣವೆಂತಲೂ ಯೋಚಿಸುತ್ತಿದ್ದಳು. ನಿಯಮಾನುಸಾರವಾಗಿ ಬಾಜಿಸಲು ಇಂಪಾಗಿ ಧ್ವನಿಕೊಡುವ ವಾದ್ಯವು ನಿಯಮ ತಪ್ಪಿ ಬಾಜಿಸಿದರೆ ಕರ್ಕಶಧ್ವನಿಯಿಂದ ಅಸಹ್ಯವಾಗುವಂತೆಯೇ, ಈ ರಾಜಕುವರನ ಗಂಭೀರವಾದ ಮನೋಭಾವವೂ, ಸೂಕ್ಷ್ಮವಾದ ಬುದ್ಧಿಯೂ ಮನೋವ್ಯಥೆಯಿಂದ ವಕ್ರವಾಗಿ ಕಾಣುತ್ತಿವೆಯೆಂದು ತರ್ಕಿಸಿದಳು. ತಂದೆಯನ್ನು ಕೊಂದವನ ಮೇಲೆ ಹಗೆ ತೀರಿಸಿಕೊಳ್ಳುವ ಯೋಚನೆಯೂ, ರಮಣಿಯ ಪ್ರೇಮವನ್ನು ಪಡೆಯುವ ಯೋಚನೆಯೂ ಹೃದಯದಲ್ಲಿ ಏಕತ್ರ ಸ್ಥಾನಹೊಂದಲಾರವು. ಆದರೂ ಅವನಿಗೆ ಆ ರಮಣಿಯ ಯೋಚನೆಯು ಆಗಾಗ್ಗೆ ಬರುತ್ತಿತ್ತು. ಹೀಗಿರಲು ಒಂದಾನೊಂದು ದಿನ ತಾನು ಆ ಗುಣವತಿಯನ್ನು ಅಕಾರಣವಾಗಿ ಅತ್ಯಂತ ಕಠಿಣವಾಗಿ ಕಂಡುದಾಗಿ ಅವನ ಮನಸ್ಸಿಗೆ ಬರುತ್ತಲೇ, ಅವನ ಹುಚ್ಚಿಗೆ ಅನುಗುಣವಾಗಿ ತೋರಿಬರುವಂತೆ ಅತ್ಯುಕ್ತಿಭರಿತವಾದ ಒಂದು ಹುಚ್ಚು ಹುಚ್ಚು ಪತ್ರವನ್ನು

ಬರೆದನು. ಹುಚ್ಚು ಹುಚ್ಚಾಗಿ ತೋರುತ್ತಿದ್ದರೂ ಅದರಲ್ಲಿ ಪ್ರೀತಿಯು ಮನೋಜ್ಞಭಾವವು ಅಲ್ಲಲ್ಲಿ ವ್ಯಕ್ತವಾಗುತ್ತಿತ್ತು. ಆದ್ದರಿಂದ ಅವನ ಹೃದಯತಲದಲ್ಲಿ ತನ್ನ ಮೇಲಣ ಗಂಭೀರವಾದ ಪ್ರೇಮವು ನೆಲಸಿದ್ದಿತೆಂದು ಆ ತರುಣಿಯು ತಿಳಿಯದೆ ಹೋಗಲಿಲ್ಲ.

"ನಕ್ಷತ್ರಗಳು ತೇಜೋಮಯವೇ, ಸೂರ್ಯನು ಸ್ಥಿರನೇ, ಸತ್ಯ ಅಸತ್ಯವೇ ಎಂದು ಬೇಕಾದರೂ ಸಂದೇಹ ಬರಲಿ, ಆದರೆ ನಾನು ನಿನ್ನನ್ನು ಪ್ರೀತಿಸುತ್ತೇನೆಯೇ ಎಂಬಂಶದಲ್ಲಿ ಮಾತ್ರ ಸಂದೇಹ ಬರದಿರಲಿ!" —ಎಂಬಿವೇ ಮೊದಲಾದ ರೀತಿಯಲ್ಲಿ ಕಾಗದವನ್ನು ಬರೆದನು. ಅವಳು ಕರ್ತವ್ಯವನ್ನನುಸರಿಸಿ ಅದನ್ನು ತನ್ನ ತಂದೆಗೆ ತೋರಿಸಿದಳು. ಆ ವೃದ್ಧನು ಅದನ್ನು ರಾಜನಿಗೂ ರಾಣಿಗೂ ತಿಳಿಸುವುದು ತನ್ನ ಕರ್ತವ್ಯವೆಂದು ಭಾವಿಸಿ, ಅವರಿಗೆ ತಿಳಿಸಿದನು. ಅವರು ಅಂದಿನಿಂದ ರಾಜಕುವರನ ಮನೋವಿಕಾರಕ್ಕೆ ಪ್ರಣಯಾತುರಾಗವೇ ಕಾರಣವೆಂದು ನಿರ್ಧರಮಾಡಿಕೊಂಡರು. ಈ ರಮಣಿಯ ಅಸದೃಶವಾದ ರೂಪಾತಿಶಯವೂ ಸೌಶೀಲ್ಯವೂ ರಾಜಕುಮಾರನನ್ನು ವಿವಾಹಾನಂತರ ಹಿಂದಿನ ಸಂತೋಷಚಿತ್ತವೃತ್ತಿಗೆ ತರುವುವೆಂದು ರಾಣಿಯು ಯೋಚಿಸಿದಳು.

ಆದರೆ ರಾಜಕುವರನ ವ್ಯಾಧಿಯು ಇವಳ ಊಹೆಗೆ ಮೀರಿದ ಕಾರಣವುಳ್ಳದ್ದಾಗಿಯೂ, ಆದುದರಿಂದ ಇವಳ ಕೋರಿಕೆಯಂತೆ ಗುಣ ಹೊಂದಲಾರದುದಾಗಿಯೂ ಇತ್ತು. ತನ್ನ ಘಾತುಕನನ್ನು ವಧಿಸುವಂತೆ ಭೂತವು ಮಾಡಿದ ಅಪ್ಪಣೆಯನ್ನು ನೆರವೇರಿಸುವವರೆಗೆ ಅವನಿಗೆ ಮನಶ್ಶಾಂತಿಯುಂಟಾಗುವ ಸಂಭವವೇ ಇರಲಿಲ್ಲ. ಆ ಕೆಲಸವನ್ನು ನೆರವೇರಿಸುವುದಕ್ಕೆ ಕ್ಷಣಕಾಲ ಸಾವಕಾಶಮಾಡಿದರೂ, ತಂದೆಗೆ ಅವಿಧೇಯನಾಗಿ ನಡೆದ ಮಹಾಪಾಪವು ಪ್ರಾಪ್ತವಾಗುವುದೆಂದು ರಾಜಕುವರನು ಪರಿತಪಿಸುತ್ತಿದ್ದನು. ತನ್ನ ತಂದೆಯ ಕೊಲೆಪಾತಕಿಯು ಈಗ ರಾಜನಾಗಿರುತ್ತ, ಸರ್ವದಾ ಅಂಗರಕ್ಷಕರಿಂದ ಪರಿವೃತನಾಗಿರುವನು, ಅಥವಾ ತನ್ನ ತಾಯಿಯಾದ ಅವನ ಭಾರ್ಯೆಯ ಜೊತೆಯಲ್ಲಿರುವನು, ರಾಜನನ್ನು ರಾಣಿಯ ಬಳಿಯಿಂದ ದೂರವಾಗಿಡುವುದು ಸುಲಭವಾಗಿರಲಿಲ್ಲ. ಈ ಕಾರಣಗಳಿಂದ

ಇವನ ಕಾರ್ಯಸಾಧನೆಯು ಬಹು ತೊಡಕುಗಳಿಗೆ ಸಿಕ್ಕಿತು. ಅಲ್ಲದೆ ತನ್ನ ತಂದೆಯನ್ನು ಕೊಂದು ಸಿಂಹಾಸನವನ್ನು ಆಕ್ರಮಿಸಿಕೊಂಡಿರುವವನು ತನ್ನ ತಾಯಿಗೆ ಪ್ರಿಯನೆಂಬ ಕಾರಣದಿಂದಲೂ, ತಂದೆಯ ಭೂತಾತ್ಮವು "ನಿನ್ನ ತಾಯಿಯ ಅತ್ಯಾಚಾರ ವಿಚಾರದಲ್ಲಿ ಅವಳ ಮನಸ್ಸಾಕ್ಷಿಯೂ ಭಗವಂತನೂ ಶಿಕ್ಷಕರಾಗಿರಬೇಕಲ್ಲದೆ, ಮಗನಾದ ನೀನು ಅವಳನ್ನು ದಂಡಿಸತಕ್ಕುದಲ್ಲ" ಎಂದು ಹಿಂದೆ ಹೇಳಿದ್ದ ಕಾರಣದಿಂದಲೂ, ತನ್ನ ತಾಯಿಯ ಅತ್ಯಾಚಾರಕ್ಕಾಗಿ ರಾಜಕುವರನು ದುಃಖಿತನಾಗಿದ್ದುದರಿಂದಲೂ, ಇವನ ಕಾರ್ಯೋತ್ಸಾಹವು ಇನ್ನೂ ಮಂದವಾಗುತ್ತಿತ್ತು. ಈ ರಾಜಕುವರನಂತಹ ಮೃದುಸ್ವಭಾವದವನಿಗೆ ಮನುಷ್ಯಮಾತ್ರನನ್ನು ಕೊಲೆಮಾಡುವುದೆಂಬುದೇ ಅತಿನಿಂದ್ಯವೂ ಘೋರವೂ ಆದ ವಿಚಾರವಾಗಿತ್ತು. ಈ ರೀತಿಯಾದ ಮನೋವ್ಯಾಧಿಯೂ, ಬಹುಕಾಲದಿಂದ ಇವನನ್ನು ಬಾಧಿಸುತ್ತಿದ್ದ ವಿವಿಧಾಲೋಚನೆಗಳಿಂದುಂಟಾದ ಚಿತ್ತಕ್ಷೋಭೆಯೂ ಕಾರ್ಯಸಾಧನೆಗೆ ದೃಢಸಂಕಲ್ಪಮಾಡಲು ಅಡಚಣೆಗಳಾದುವು. ಆದುದರಿಂದ ಡೋಲಾಯಮಾನವಾದ ಮನಸ್ಸುಳ್ಳವನಾಗಿ ಕಟ್ಟಕಡೆಯ ಲಕ್ಷ್ಯವನ್ನು ಸಾಧಿಸಲು ಹಿಂಜರಿದನು. ಅಲ್ಲದೆ "ನಾನು ನೋಡಿದುದು ನಿಜವಾಗಿಯೂ ನಮ್ಮ ತಂದೆಯ ಪ್ರೇತವೇ ? ಅಥವಾ ಕಾಮರೂಪಿಯಾದ ಪಾಪಪುರುಷನು, ಅತ್ಯಂತ ಘೋರವಾದ ಕೊಲೆಮಾಡಿಸುವುದಕ್ಕಾಗಿ, ಮೃತನಾದ ನನ್ನ ತಂದೆಯ ರೂಪವನ್ನು ಹೊಂದಿಬಂದು ವ್ಯಾಕುಲದಿಂದ ದುರ್ಬಲನಾದ ನನ್ನನ್ನು ಮೆಟ್ಟಿಕೊಂಡಿರಬಹುದೆ ?" ಎಂದು ತನ್ನಲ್ಲಿ ತಾನೇ ವಿಚಾರಮಾಡತೊಡಗಿದನು. ಅಂತೂ ಭ್ರಮಾತ್ಮಕವಾಗಿರಬಹುದಾದ ಛಾಯಾಸ್ವರೂಪಿನ ಭೂತದ ಉದ್ದೇಶದಂತೆ ನಡೆಯಲು ತನಗೆ ಇನ್ನೂ ಪ್ರಬಲವಾದ, ಖಂಡಿತವಾದ, ಆಧಾರಗಳು ಆವಶ್ಯಕವೆಂದು ನಿರ್ಧರಿಸಿದನು.

ಈ ರೀತಿಯಲ್ಲಿ ಈ ರಾಜಕುವರನು ವಿವಿಧವಿಚಾರಮಗ್ನನಾಗಿರುವಲ್ಲಿ ಆಸ್ಥಾನಕ್ಕೆ ಒಂದು ನಾಟಕ ಸಂಘದವರು ಬಂದರು. ಹಿಂದೆ ಈ ರಾಜಕುವರನು ಇವರ ನಾಟಕಾಭಿನಯದಲ್ಲಿ ಅತ್ಯಂತ ಸಂತಸಗೊಳ್ಳುತ್ತಿದ್ದನು.

ಅದರಲ್ಲಿಯೂ ಮುಖ್ಯವಾಗಿ ಟ್ರ್ಯಾಯ್ ಪಟ್ಟಣದ ಅರಸನಾದ ಪ್ರಿಯಂ ಎಂಬಾತನ ಮರಣ, ಅವನ ರಾಣಿಯಾದ ಹಕ್ಯುಬಾ ಎಂಬಾಕೆಯ ಶೋಕ, ಈ ವಿಚಾರಗಳನ್ನು ಅಭಿನಯಿಸುವ ಒಬ್ಬ ನಟನ ಪಾತ್ರ ಪ್ರದರ್ಶನದಲ್ಲಿಯೂ, ಅವನ ವಾಕ್ಸರಣಿಯಲ್ಲಿಯೂ ಈ ರಾಜಕುವರನಿಗೆ ಆದರವು ಏಗಿಲಾಗಿತ್ತು. ಇವನು ತನ್ನ ಪೂರ್ವ ಪರಿಚಿತರೂ ಸ್ನೇಹಿತರೂ ಆದ ಆ ನಾಟಕ ಸಂಘದ ವರನ್ನು ಅಕ್ಕರೆಯಿಂದ ಕಂಡು, ಹಿಂದೆ ವಿವರಿಸಿದ ಪಾತ್ರವು ಒಲು ಚೆನ್ನಾಗಿದ್ದದ್ದರಿಂದ, ಇನ್ನೊಮ್ಮೆ ಅದನ್ನು ನೋಡಬೇಕೆಂದೂ, ಕೇಳ ಬೇಕಂದೂ ಕುತೂಹಲಪಟ್ಟನು. ಆ ನಟನು ಸಮಸ್ತವೂ ಆಗ ಕಣ್ಣೆದುರಿಗೆ ನಡೆದಿದ್ದರೆ ಹೇಗೋ ಹಾಗೆ ಮನಮರುಗಿಸುವಂತಹ ವಾಗ್ವೈಖರಿಯಿಂದಲೂ, ಅಭಿನಯ ಕೌಶಲದಿಂದಲೂ—ಪ್ರಜಾಸಹಿತವಾದ ಟ್ರ್ಯಾಯ್ ಪಟ್ಟಣವನ್ನು ಶತ್ರುಗಳು ಸುಟ್ಟು ಬೂದಿಮಾಡಿ, ವೃದ್ಧನೂ ದುರ್ಬಲನೂ ಆದ ಅರಸನನ್ನು ಕ್ರೂರವಾಗಿ ಕೊಲ್ಲಲು, ಅವನ ವೃದ್ಧಳಾದ ರಾಣಿಯು ಕಿರೀಟವನ್ನು ಧರಿಸುತ್ತಿದ್ದ ತಲೆಯ ಮೇಲೆ ಒಂದು ಕೊಳಕು ಬಟ್ಟೆಯನ್ನು ಕವಿಚಿಕೊಂಡು, ಶ್ರೇಷ್ಠವಾದ ಪೀತಾಂಬರವನ್ನು ಧರಿಸುತ್ತಿದ್ದ ಶರೀರಕ್ಕೆ ಕಂಬಳಿಯ ತುಂಡನ್ನು ಸುತ್ತಿಕೊಂಡು, ದುಃಖಾತಿರೇಕದಿಂದ, ಒರಿಯ ಕಾಲಿನಲ್ಲಿ ಹುಚ್ಚುಹುಚ್ಚಾಗಿ ಅರಮನೆಯಲ್ಲೆಲ್ಲಾ ಓಡಿಯಾಡಿದ್ದನ್ನು ವಿವರಿಸುತ್ತಿರಲಾಗಿ ಅದೆಲ್ಲವೂ ಪ್ರತ್ಯಕ್ಷತಃ ನಡೆದಂತೆ ಬೋಧೆಯಾಗುತ್ತಿತ್ತು. ಪ್ರೇಕ್ಷಕರೆಲ್ಲರೂ ಗೋಳಾಡಿದರು. ಆ ನಟನೂ ಗದ್ಗದಕಂಠನಾಗಿ, ಧಾರಾಕಾರವಾಗಿ ಸುರಿಯುತ್ತಿರುವ ಕಣ್ಣೀರಿನಿಂದ ಆ ಪಾತ್ರವನ್ನು ಪ್ರದರ್ಶಿಸಿದನು. "ಆಹಾ! ಈ ಪಾತ್ರವನ್ನು ಪ್ರದರ್ಶಿಸಿದ ನಟನು ಕೇವಲ ಕಲ್ಪಿತವಾದ ವಾಕ್ಯಗಳನ್ನು ಪಠಿಸುತ್ತಾ, ತಾನು ಕಂಡೇ ಅರಿಯದ, ಸತ್ತು ಎಷ್ಟೋ ಶತಮಾನಗಳಾಗಿ ಹೋದ ಹಕ್ಯುಬಾ ಎಂಬವಳಿಗಾಗಿ ಇಷ್ಟು ದುಃಖಕ್ಕೊಳಗಾಗಲು, ಮೊನ್ನೆ ಮೊನ್ನೆ ಬದುಕಿ ರಾಜನಾಗಿದ್ದು ಕೊಲೆಗೆ ಈಡಾದ ಸ್ವಂತ ತಂದೆಯ ವಿಚಾರದಲ್ಲಿ ದುಃಖವೇ ಇಲ್ಲದಿರುವ ನಾನು ಎಂಥ ಮಡೆಯ! ಹಗೆ ತೀರಿಸಿಕೊಳ್ಳಬೇಕೆಂಬ ನನ್ನ ಸಂಕಲ್ಪವು ಔದಾಸೀನ್ಯದಿಂದ ಮಂದವಾದ ಮರವೆಯಲ್ಲಿ ನಿದ್ರೆಮಾಡಿಬಿಟ್ಟಿತಲ್ಲಾ!" ಎಂದು ಯೋಚಿಸತೊಡಗಿದನು.

ಹೀಗೆ ಅವನು ನಟರ ವಿಚಾರವನ್ನೂ, ನಾಟಕಾಭಿನಯವಿಚಾರವನ್ನೂ, ಉತ್ತಮವಾದ ನಾಟಕವು ಪ್ರೇಕ್ಷಕರ ಚಿತ್ತವೃತ್ತಿಯಲ್ಲಿ ಬಲವಾಗಿ ಕಾರ್ಯ ಮಾಡುವುದೆಂಬುದನ್ನೂ ಕುರಿತು ಯೋಚಿಸುತ್ತಿರುವಲ್ಲಿ, ಒಂದಾನೊಂದು ಕೊಲೆಯ ವಿಚಾರವೂ, ಆ ಕೊಲೆಮಾಡಿದವನು ತಾನುಮಾಡಿದ ಕೊಲೆಯನ್ನೇ ಹೋಲುವ ಒಂದು ಕೊಲೆಯ ಅಭಿನಯವು ರಂಗಸ್ಥಳದಲ್ಲಿ ಬಹು ಚೆನ್ನಾಗಿ ಅಭಿನಯಿಸಲ್ಪಡುವುದನ್ನು ನೋಡಿದಮಾತ್ರದಿಂದಲೇ ತನ್ನ ಅಪರಾಧವನ್ನು ಆ ಕ್ಷಣದಲ್ಲಿಯೇ ಅಲ್ಲಿಯೇ ಹೇಳಿಕೊಂಡನೆಂಬ ಸಂಗತಿಯೂ ಜ್ಞಾಪಕಕ್ಕೆ ಬಂತು.

ಈ ನಟರು ತನ್ನ ಚಿಕ್ಕಪ್ಪನೆದುರಿಗೆ ತನ್ನ ತಂದೆಯ ಕೊಲೆಯನ್ನು ಹೋಲುವಂತಹ ಒಂದು ನಾಟಕವನ್ನು ಆಡಬೇಕೆಂದೂ, ಆಗ ತಾನು ಅತ್ಯಂತ ಜಾಗರೂಕತೆಯಿಂದ, ಆ ನಾಟಕದ ದರ್ಶನವು ಅವನ ಚಿತ್ತವೃತ್ತಿಯಲ್ಲಿ ಏನು ಪರಿಣಾಮಮಾಡುವುದೆಂಬುದನ್ನು ಕಾಯುತ್ತಿರಬೇಕೆಂದೂ, ಅವನ ಮುಖಭಾವವೇ ಮೊದಲಾದವುಗಳಿಂದ ಅವನ ಮನೋಭಾವವನ್ನು ತಿಳಿದು, ತನ್ನ ತಂದೆಯ ಕೊಲೆಗೆ ಅವನು ಕಾರಣನೆ, ಅಲ್ಲವೆ, ಎಂಬುದನ್ನು ನಿಷ್ಕರ್ಷಿಸಬೇಕೆಂದೂ ಯೋಚಿಸಿದನು. ಅದರಂತೆಯೇ ಒಂದು ನಾಟಕವು ರಚಿತವಾಯಿತು. ಅದನ್ನು ನೋಡುವುದಕ್ಕೆ ರಾಜನೂ ರಾಣಿಯೂ ಬರುವಂತೆ ಪ್ರಾರ್ಥಿತರಾದರು.

ಆ ನಾಟಕದ ಕಥೆಯು, "ವಿಯನ್ನಾ ನಗರದಲ್ಲಿ ಒಬ್ಬಾನೊಬ್ಬ ಡ್ಯೂಕನಿದ್ದನು ಅವನ ಭಾಗ್ಯಾಪಹಾರಕ್ಕಾಗಿ ಅವನ ಸಮೀಪ ಬಂಧುವೇ ಅವನನ್ನು ಕೊಲೆಮಾಡಿದನು. ಕೆಲವು ಕಾಲಾನಂತರ, ಆ ಕೊಲೆಪಾತಕನು ಆ ಡ್ಯೂಕನ ಪದವಿಯನ್ನೂ, ಅವನ ಹೆಂಡತಿಯ ಪ್ರೇಮವನ್ನೂ ಪಡೆದನು" —ಎಂಬುದಾಗಿತ್ತು. ಇದು ತನ್ನನ್ನು ಹಿಡಿಯುವುದಕ್ಕಾಗಿ ಒಡ್ಡಿದ ಬೋನೆಂಬುದನ್ನು ತಿಳಿಯದೆ ಆ ರಾಜ್ಯಾಪಹಾರಿಯೂ ಭ್ರಾತೃಘಾತುಕನೂ ಆದ ಕ್ಲಾಡಿಯಸ್ಸನು ಪತ್ನೀಪರಿವಾರಸಹಿತನಾಗಿ ಆ ನಾಟಕವನ್ನು ನೋಡಲು ಬಂದಿದ್ದನು. ರಾಜಕುವರನೂ ಸಹ ಅತ್ಯಂತ ಜಾಗರೂಕತೆಯಿಂದ, ಅವನ ಮುಖವಿಕಾರವೇ ಮೊದಲಾದವುಗಳನ್ನು ಪರೀಕ್ಷಿಸುವ ಕುತೂಹಲದಿಂದ ಅವನಿಗೆ ಸಮೀಪದಲ್ಲಿಯೇ ಕಾದು ಕುಳಿತಿದ್ದನು.



ಹ್ಯಾಮ್ಲೆಟ್ ರಾಜಪುತ್ರನು ನಾಟಕವಾಡಿಸಿ ರಾಜ ರಾಣಿಯರನ್ನು ಪರೀಕ್ಷಿಸುವುದು.

ಆ ಡ್ಯೂಕ್ ಮತ್ತು ಅವನ ಹೆಂಡತಿಯ ಸಂಭಾಷಣೆಯೇ ಮೊದಲನೆಯದಾಗಿ ನಾಟಕಾರಂಭವಾಯಿತು. ಈ ಸಂಭಾಷಣೆಯಲ್ಲಿ ಆ ಡ್ಯೂಕಿನ ಮಡದಿಯು ತನಗೆ ತನ್ನ ಪತಿಯಲ್ಲಿರುವ ಅಪರಿಮಿತವಾದ ಪ್ರೀತಿವಾತ್ಸಲ್ಯಗಳನ್ನು ವಿವರಿಸಿ, ಅವನ ಅನಂತರ ತಾನು ಬದುಕಿರಲಾರಳೆಂದೂ, ಹಾಗೂ ಬದುಕಿದ್ದರೆ, ಮತ್ತೆ ವಿವಾಹವಾದಲ್ಲಿ ಪಾತಕಿಯಾಗುವಳೆಂದೂ, ಪುನರ್ವಿವಾಹಮಾಡಿಕೊಳ್ಳುವ ಹೆಂಗಸರು ತಮ್ಮ ಪತಿಯನ್ನು ಕೊಲ್ಲಲು ಹೇಸರೆಂದೂ ಹೇಳಿದಳು. ಈ ಮಾತುಗಳನ್ನು ಕೇಳಿ ಅರಸಿನ ಮುಖವು ವಿವರ್ಣವಾಯಿತು. ಅರಸಿತಿಗೆ ದಾರುಣವಾದ ಯಾತನೆಯುಂಟಾಯಿತು. ಕಥೆಯು ಮುಂದಕ್ಕೆ ಸಾಗಿ ಆ ಡ್ಯೂಕನು ಉದ್ಯಾನವನದಲ್ಲಿ ಮಲಗಿರಲು ಅವನ ಬಂಧುವು ಅವನಿಗೆ ವಿಷವನ್ನು ಹಾಕಲು ಬಂದನು. ಈ ಕಥಾ ಸಂದರ್ಭವು ಅರಸನಿಗೆ ತನ್ನ ಅಣ್ಣನು ಉದ್ಯಾನವನದಲ್ಲಿ ಮಲಗಿರುವಾಗ್ಗೆ ತಾನು ನಡೆಸಿದ ಘೋರ ಕರ್ಮವನ್ನು ತಟ್ಟನೆ ಸ್ಮೃತಿಪಥಕ್ಕೆ ತಂದು ತೋರಿಸಿತು. ಅವನ ಅಂತರಂಗವು ಛಿದ್ರಛಿದ್ರವಾಯಿತು. ಇನ್ನು ನಾಟಕದ ಮುಂದಿನ ಕಥೆಯನ್ನು ನೋಡುವುದಕ್ಕೆ ಕುಳಿತುಕೊಳ್ಳಲು ಅಸಾಧ್ಯವಾಯಿತು. ಆದ್ದರಿಂದ ಆಕಸ್ಮಿಕವಾಗಿ ಅಸ್ವಸ್ಥನಾದಂತೆ, ತಟ್ಟನೆ ನಾಟಕ ಮಂದಿರವನ್ನು ಬಿಟ್ಟು ತನ್ನ ಅಂತಃಪುರಕ್ಕೆ ಹೊರಟುಹೋದನು. ಅರಸನು ಹೊರಟುಹೋದ ಕಾರಣ ನಾಟಕವೂ ಅಲ್ಲಿಗೆ ನಿಂತಿತು. ರಾಜಕುವರನು ತಾನು ಕಂಡು ಕೇಳಿದ್ದ ಸಂಗತಿಯು ಭ್ರಮೆಯಲ್ಲವೆಂತಲೂ, ಭೂತವು ಹೇಳಿದ ಸಂಗತಿಗಳು ನಿಜವೆಂತಲೂ ನಂಬಲು ಈಗ ಪ್ರಮಾಣವು ದೊರೆಯಿತು. ಆಶ್ಚರ್ಯಭಯಾನುಮಾನ ಹರ್ಷಗಳಿಂದ ಉದ್ವೇಗಗೊಂಡ ಹ್ಯಾಮ್ಲೆಟನು ತನ್ನ ಸ್ನೇಹಿತರ ಮುಂದೆ "ಅಯ್ಯಾ, ಆ ಭೂತವು ಹೇಳಿದ ಮಾತು ಅಕ್ಷರಲಕ್ಷ ಬಾಳುವುದು!" ಎಂದನು. ಹೀಗೆ ತನ್ನ ತಂದೆಯನ್ನು ಅವನ ತಮ್ಮನೇ ಕೊಲೆಮಾಡಿದನೆಂಬ ನಿಶ್ಚಯಜ್ಞಾನವುಂಟಾದ ಮೇಲೆ ಆ ಘಾತುಕನಿಗೆ ಯಾವ ರೀತಿಯಾದ ಶಿಕ್ಷೆಯನ್ನು ಮಾಡಿ ಹಗೆ ತೀರಿಸಿಕೊಳ್ಳಬೇಕೆಂದು ಯೋಚಿಸುತ್ತಿರುವಲ್ಲಿ, "ನಿನ್ನೊಡನೆ ಕೆಲವು ವಿಚಾರಗಳನ್ನು ಕುರಿತು ಮಾತನಾಡಬೇಕಾಗಿದೆ" ಎಂಬುದಾಗಿ ಅವನ ತಾಯಿಯು

ಹೇಳಿಕಳುಹಿಸಿ ಅವನನ್ನು ಅಂತಃಪುರಕ್ಕೆ ಕರೆಯಿಸಿಕೊಂಡಳು. ಈಚೆಗೆ ರಾಜಕುವರನ ನಡತೆಯಲ್ಲುಂಟಾದ ವ್ಯತ್ಯಾಸವು ಅರಸನನ್ನೂ ಅರಸಿತಿಯನ್ನೂ ಬಹುವಾಗಿ ನೋಯಿಸುತ್ತಿದೆ, ಎಂಬುದನ್ನು ಅರಸಿತಿಯು ತನ್ನ ಮಗನಿಗೆ ತಿಳಿಸಬೇಕೆಂಬುದು ಅರಸನ ಕೋರಿಕೆಯಾಗಿತ್ತು. ಅದರಂತೆ ಅರಸಿತಿಯು ರಾಜಕುವರನನ್ನು ಬರಮಾಡಿಕೊಂಡಳು. ಈ ತಾಯಿ ಮಕ್ಕಳ ಸಂಭಾಷಣೆಯನ್ನು ಸ್ವಲ್ಪವೂ ಲೋಪವಿಲ್ಲದಂತೆ ತಿಳಿಯಬೇಕೆಂದೂ, ಅರಸನು ತಿಳಿಯಬೇಕಾದ ಯಾವುದಾದರೂ ಸಂಗತಿಯನ್ನು ಮಗನ ಮೇಲಣ ಪಕ್ಷಪಾತದಿಂದ ಅರಸಿತಿಯು ತನಗೆ ತಿಳಿಸದಿರಲು ಅವಕಾಶವಿಲ್ಲದಿರಲೆಂದೂ, ಅರಸನು ಪೊಲೋನಿಯಸ್ ಎಂಬ ವೃದ್ಧ ಮಂತ್ರಿಯನ್ನು ಅಂತಃಪುರದಲ್ಲಿ ಒಂದು ತೆರೆಯ ಹಿಂದೆ ಹೊಂಚುಕೇಳುತ್ತಿರುವಂತೆ ನಿಯಮಿಸಿದ್ದನು. ಕುಯುಕ್ತಿ ಕುಮಂತ್ರಗಳಿಂದಲೇ ಬೆಳೆದು ವೃದ್ಧನಾದ ಮತ್ತು ಕುತ್ಸಿತವಾದ ವಕ್ರಮಾರ್ಗದಿಂದ ವಿಚಾರಗಳನ್ನು ತಿಳಿಯುವುದರಲ್ಲಿ ಉತ್ಸಾಹವುಳ್ಳ ಪೊಲೋನಿಯಸ್‌ನಿಗೆ ಈ ಹೀನಕಾರ್ಯವು ಸಮ್ಮತವಾಗಿಯೆ ಇತ್ತು. ರಾಜಕುವರನು ತಾಯಿಯ ಬಳಿಗೆ ಬಂದನು. ಅವಳು ಅವನ ನಡೆನುಡಿಗಳನ್ನು ಕುರಿತು ಸ್ಪಷ್ಟತರವಾದ ರೀತಿಯಲ್ಲಿ ಖಂಡಿಸಿ ಮಾತನಾಡತೊಡಗಿದಳು. "ನೀನು ನಿನ್ನ ತಂದೆಯನ್ನು ಬಹುವಾಗಿ ಅಪಮಾನಗೊಳಿಸಿರುವೆ" ಎಂದಳು. (ಎಂದರೆ ತಾನು ತನ್ನ ಗಂಡನ ತಮ್ಮನನ್ನು ಮದುವೆಯಾಗಿರುವುದರಿಂದ, ಈಗ ಅರಸನಾದ ಅವನನ್ನು "ನಿನ್ನ ತಂದೆ" ಎಂದು ಹೇಳಿದಳು.) ತನಗೆ ಅತ್ಯಂತ ಪೂಜ್ಯನಾದ ನಿಜವಾದ ತಂದೆಯನ್ನು ಸಂಹರಿಸಿದ ಆ ನೀಚನನ್ನು "ನಿನ್ನ ತಂದೆ" ಎಂದು ಹೇಳಿದ ಮಾತು ರಾಜಕುವರನಿಗೆ ಸಹಿಸಲಸಹ್ಯವಾಗಲು ಅತಿ ತೀಕ್ಷ್ಣವಾಗಿ ಮಗನು "ಅಮ್ಮಾ, ನೀನು ನನ್ನ ತಂದೆಯನ್ನು ಬಹುವಾಗಿ ಖೇದಗೊಳಿಸಿರುವೆ' ಎಂದನು.

ತಾಯಿ.—'ಇದು ಅಪ್ರಯೋಜಕವಾದ ಉತ್ತರ.'

ಮಗ.—'ಪ್ರಶ್ನೆಯ ಯೋಗ್ಯತೆಗೆ ತಕ್ಕ ಉತ್ತರ!'

ತಾಯಿ —'ನೀನು ಯಾರೊಡನೆ ಮಾತನಾಡುತ್ತಿರುವೆ ಎಂಬುದನ್ನು ಮರೆತಂತಿದೆ!'

ಮಗ—'ಅಯ್ಯೋ, ಮರೆತರೆ ಸಾಕಾಗಿದೆ! ಆದರೆ ಮರೆತಿಲ್ಲ. ನೀನು ನಿನ್ನ ಪತಿಯ ತಮ್ಮನ ಹೆಂಡತಿ. ನನ್ನ ತಾಯಿ. ನೀನು ಈಗ ಏನಾಗಿರುವೆಯೋ ಅದಾಗದೆ ಇದ್ದಿದ್ದರೆ ಚೆನ್ನಾಗಿತ್ತು!'

ತಾಯಿ.—'ಹಾಗೋ! ಆಗಲಿ, ನೀನು ನನ್ನ ವಿಚಾರದಲ್ಲಿ ಇಷ್ಟು ಲಘುವಾಗಿ ನಡೆಯುವುದಾದರೆ, ನಿನ್ನೊಡನೆ ಅಧಿಕಾರದಿಂದ ಮಾತನಾಡ ಬಲ್ಲವರಿಂದ ಮಾತನಾಡಿಸುವೆನು' ಎಂದು ಹೇಳಿ, ಅರಸನನ್ನೋ ಅಥವಾ ಮಂತ್ರಿಯನ್ನೋ ಬರಮಾಡುವುದರಲ್ಲಿದ್ದಳು. ರಾಜಕುವರನಿಗೆ 'ಈಗ ತಾಯಿಯು ಒಂಟಿಯಾಗಿ ಸಿಕ್ಕಿರುವಳು. ಇವಳಲ್ಲಿ ಮಾತನಾಡಿ ಇವಳ ನೀಚನಡತೆ ಇವಳಿಗೆ ಮನಗಾಣುವಂತೆ ಮಾಡುವುದು ಸಾಧ್ಯವೇ' ಎಂಬ ಯೋಚನೆ ತೋರಿತು. ಆದುದರಿಂದ ಅವಳ ಕೈಯನ್ನು ಭದ್ರವಾಗಿ ಹಿಡಿದು ಕೊಂಡು ಅವಳನ್ನು ಕುಳ್ಳಿರಿಸಿದನು. ಅವನ ಆ ಉದ್ರೇಕವನ್ನು ನೋಡಿ ಈ ಹುಚ್ಚನಿಂದ ತನಗೇನಾದರೂ ಅಪಾಯವಾಗಬಹುದೆಂದು, ತಾಯಿಯು ಭಯದಿಂದ ಕೂಗಿಕೊಂಡಳು. ಆಗ ಅಲ್ಲಿದ್ದ ಒಂದು ತೆರೆಯ ಹಿಂದಿನಿಂದ "ಹಾ! ಮಹಾರಾಣಿಯವರು!! ಸಹಾಯ! ಸಹಾಯ!" ಎಂಬ ಶಬ್ದವು ಕೇಳಿಸಿತು.

ಹ್ಯಾಮ್ಲೆಟನು ಈ ಧ್ವನಿಯನ್ನು ಕೇಳಿ, ಅರಸಾಗಿರಬಹುದೆಂದು ಊಹಿಸಿ ಧ್ವನಿ ಬಂದ ಕಡೆಯಲ್ಲಿ ಶಬ್ದವು ಅಡಗುವವರೆಗೆ ತನ್ನ ಕತ್ತಿಯಿಂದ ಇರಿದನು. ಅನಂತರ ಅವನು ಮೃತನಾಗಿರಬಹುದೆಂದು ನಿಶ್ಚಯಿಸಿಕೊಂಡನು. ಆ ಕಳೇಬರವನ್ನು ಈಚೆಗೆ ಎಳೆಯಲಾಗಿ, ಅದು ಅರಸಿನ ಕಳೇಬರವಾಗಿರದೆ, ತೆರೆಯ ಹಿಂದೆ ಗೂಢಚಾರನಾಗಿ ಅಡಗಿಕೊಂಡಿದ್ದ, ಅಪ್ರಾರ್ಥಿತವಾಗಿ ಎಲ್ಲದರಲ್ಲೂ ತಲೆ ಹಾಕಿಕೊಂಡು ಬರುತ್ತಿದ್ದ, ಪೊಲೋನಿಯಸ್ ಆಗಿದ್ದನು. ಆಗ ರಾಣಿಯು, "ಅಯ್ಯೋ! ಏನು ಅವಿವೇಕವಾದ ಘೋರಕರ್ಮವನ್ನು ಮಾಡಿದೆ!" ಎಂದಳು.

ರಾಜಕುವರನು "ತಾಯೇ, ಘೋರಕರ್ಮವೇನೋ ಅಹುದು; ಆದರೆ ಅರಸನನ್ನು ಕೊಂದು ಅವನ ತಮ್ಮನನ್ನು ಮದುವೆ ಮಾಡಿ ಕೊಂಡ ನಿನ್ನ ಕೃತ್ಯದಷ್ಟು ನೀಚವಲ್ಲ" ಎಂದನು. ಈಗ ಅವನಿಗೆ ತನ್ನ

ತಾಯಿಯೊಡನೆ ಸ್ಪಷ್ಟವಾಗಿ ಮಾತನಾಡಿಬಿಡಬೇಕೆನ್ನಿಸಿತು. ತಂದೆ ತಾಯಿಗಳ ತಪ್ಪನ್ನು ಮೃದುವಾದ ರೀತಿಯಲ್ಲಿ ಭಾವಿಸಬೇಕಾದುದು ಧರ್ಮವಾಗಿಯೂ ಸಹಜವಾಗಿಯೂ ಇದ್ದರೂ, ಭಯಂಕರವಾದ ಅಪರಾಧಗಳ ವಿಚಾರದಲ್ಲಿ ಮಗನು ತಾಯಿಯಾದವಳನ್ನು ಸುಮ್ಮನೆ ಬಯ್ಯಬೇಕೆಂಬ ಉದ್ದೇಶದಿಂದ ಅಲ್ಲದೆ, ಅವಳನ್ನು ದುರ್ಮಾರ್ಗದಿಂದ ತಪ್ಪಿಸಿ ಸುಪಥವನ್ನು ಹಿಡಿಯುವಂತೆ ಮಾಡುವುದಕ್ಕಾಗಿ ತಕ್ಕಂತೆ ಮಾತನಾಡುವುದು ವಿಹಿತವಾದದ್ದೇಯೆ. ಆದ್ದರಿಂದ ಸುಗುಣಿಯಾದ ರಾಜಕುವರನು ಹೀಗೆಂದನು:—

"ಪತಿಯು ಮೃತನಾದ ಅಲ್ಪಕಾಲದಲ್ಲಿಯೇ, ಆತನನ್ನು ಮರೆತು ನೀನು ಪುನರ್ವಿವಾಹವಾದುದೂ, ಅದರಲ್ಲಿಯೂ ಅವನನ್ನು ಕೊಲೆಮಾಡಿದವನನ್ನು ಮದುವೆಯಾದುದೂ, ಎಂಥ ನೀಚಕೃತ್ಯ! ನಿನ್ನ ಮೊದಲ ಮದುವೆಯಲ್ಲಿ ನೀನು ನಮ್ಮ ತಂದೆಗೆ ಮಾಡಿಕೊಟ್ಟ ಭಾಷೆ ಪ್ರತಿಜ್ಞೆಗಳೋ! ಇದನ್ನು ನೋಡಿದರೆ ಹೆಂಗಸರ ಭಾಷ ಪ್ರಮಾಣಗಳೇ ನಿರರ್ಥಕ, ಸದ್ಗುಣವೆಂಬುದೇ ಸಂದೇಹ, ವಧೂವರರ ಪ್ರತಿಜ್ಞೆಗಳು ಜೂಜುಖೋರರ ಆಣೆ ಭಾಷೆಗಳಿಗಿಂತಲೂ ಕೀಳು, ಧರ್ಮವೆಂಬುದು ಬೂಟಾಟಿಕೆ, ಮಾತಿನ ಮಾಲೆ—ಎನ್ನಿಸುತ್ತದೆ. ಪಂಚಭೂತಗಳು ಸಹ ನಿನ್ನ ಅತ್ಯಾಚಾರವನ್ನು ಸಹಿಸದೆ ನಾಚಿಕೆಪಡುತ್ತವೆ. ನಿನ್ನ ಪತಿಯ ಮತ್ತು ಉಪಪತಿಯ ಚಿತ್ರಪಟಗಳನ್ನಾದರೂ ಹೋಲಿಸಿ ನೋಡು." ಎಂದು ತನ್ನ ತಂದೆಯ ಚಿತ್ರಪಟವನ್ನು ತೋರಿಸಿ, ಎಂಥ ಸುಂದರವಾದ ದೃಷ್ಟಿ! ಏನು ದಿವ್ಯವಾದ ಆಕೃತಿ! ಮನ್ಮಥನ ಮುಂಗುರುಳು, ದೇವೇಂದ್ರನ ಫಾಲಫಲಕ! ಗಗನಚುಂಬಿಯಾದ ಮಹಾಮೇರುವಿನ ಮೇಲೆ ಕುಳಿತು ಅದನ್ನು ಬೆಳಗುತ್ತಿರುವ ದೇವತೆಯಂತಿದ್ದಾನೆ ಈತನು ನಿನ್ನ ಪತಿಯಾಗಿದ್ದನು" ಎಂದು ಹೇಳಿ, ಮತ್ತೊಂದನ್ನು ತೋರಿಸುತ್ತ, ಇದೋ ನೋಡು, ಇದು ಈಗಿನ ನಿನ್ನ ಪತಿ! ಆ ನಿನ್ನ ಪತಿಯ ಸ್ಥಾನವನ್ನು ಅಕ್ರಮದಿಂದ ಆಕ್ರಮಿಸಿರುವವನು! ಅಂಥ ಆರೋಗದೃಢಕಾಯನಾದ ಅಣ್ಣನನ್ನು ಪೈರಿಗೆ ಹುಳು ಹತ್ತಿ ಕೊಲ್ಲುವಂತೆ ಕೊಂದಕ್ರಿಮಿ ಆ ಮನ್ಮಥನ ಮುಂದೆ ಈ ಮರ್ಕಟನೆ?" ಎಂದು ಮನಮರುಗುವಂತೆ ಹೇಳಿದನು. ಹೀಗೆ ತನ್ನ ಕುಮಾರನು ತನ್ನ ಪಾಪಮಯವಾದ ಅಂತರಂಗ

ವನ್ನು ತೋರಿಸಿಕೊಡಲು, ರಾಣಿಯು ಬಹುವಾಗಿ ನಾಚಿಕೆಪಟ್ಟಳು. ಭಯಂಕರವೂ ವಿಕಾರವೂ ಆದ ತನ್ನ ದುಷ್ಟತನವು ಗೋಚರಿಸಿ ಮೂರ್ಛೆ ಬಂದಂತಾದಳು. "ನಿನ್ನ ಪತಿಯನ್ನು ಸಂಹರಿಸಿ, ಕಳ್ಳನಂತೆ ಕಿರೀಟವನ್ನು ಅಪಹರಿಸಿದವನೊಡನೆ ಸತಿಯಾಗಿ ಬಾಳುವುದು ನಿನಗೆ ಹೇಗೆ ಸಮ್ಮತ ವಾಯಿತು ?" ಎಂದು ರಾಜಕುವರನು ಹೇಳುತ್ತಿರುವವೇಳೆಗೆ, ಆ ತಂದೆಯ ಭೂತವು ಅವನು ಜೀವಂತನಾಗಿದ್ದಾಗ್ಗೆ ಕಾಣುತ್ತಿದ್ದಂತೆಯೇ, ಇವನು ಹಿಂದೆ ನೋಡಿದ್ದಾಗ ಕಂಡು ಬಂದ ರೂಪದಿಂದಲೇ, ಅಂತಃಪುರವನ್ನು ಪ್ರವೇಶಿಸಿತು. ರಾಜಕುವರನು ಭೀತನಾಗಿ ಆ ಭೂತವು ಏನನ್ನು ಬಯಸು ವುದೆಂದು ವಿಚಾರಮಾಡಿದನು.

ಭೂತವು "ನೀನು ಮರೆತಂತೆ ಕಾಣುವ ನಿನ್ನ ವಾಗ್ದಾನವನ್ನು, ನನ್ನ ಕೊಲೆಗೆ ಪ್ರತೀಕಾರವನ್ನು, ಜ್ಞಾಪಕಮಾಡಲು ಬಂದೆನು. ನಿನ್ನ ತಾಯಿಯು ಭಯದಿಂದಲೂ ಶೋಕಾತಿಶಯದಿಂದಲೂ ಮೃತಳಾದಾಳು ! ಅವಳೊಡನೆ ಜಾಗ್ರತೆಯಾಗಿ ಮಾತನಾಡು" ಎಂದು ಹೇಳಿ, ಅದೃಶ್ಯ ವಾಯಿತು. ಆದರೆ ಆ ಭೂತವು ನಿಂತಿದ್ದ ಸ್ಥಳವನ್ನು ತೋರಿಸುವುದರಿಂದ ಲಾಗಲಿ, ಅಥವಾ ಎಷ್ಟು ವಿವರಣೆಯಿಂದಲಾಗಲಿ, ರಾಜಕುವರನಿಗೆ ತಾಯಿಯನ್ನು ನಂಬುವಂತೆ ಮಾಡಲಾಗಲಿಲ್ಲ. ಅವಳ ಕಣ್ಣಿಗೆ ಶೂನ್ಯವಾಗಿ ಕಾಣುವ ಸ್ಥಳದಲ್ಲಿ ತನ್ನ ಮಗನು ಏನೇನೋ ಮಾತನಾಡುತ್ತಿರುವುದು ಅವಳಿಗೆ ಹೆಚ್ಚು ಭಯವನ್ನುಂಟುಮಾಡಿತು ಆದರೂ ಇದಕ್ಕೆ ಕಾರಣವು ಅವನ ಅಸ್ವಸ್ಥತೆಯೇ ಎಂದು ಭಾವಿಸಿದಳು. ರಾಜಕುವರನು ತಾಯಿಯನ್ನು ಕುರಿತು "ಅಮ್ಮಾ, ಸಂಕಟದಿಂದ ಮೃತಿಹೊಂದಿದ ತಂದೆಯ ಭೂತವು ಭೂಮಿಗೆ ಮತ್ತೆ ಬಂದುದು ನಿನ್ನ ದುಷ್ಟತನದಿಂದ ಎಂಬುದನ್ನು ಒಪ್ಪಿ ಕೊಳ್ಳದೆ, ಇದೆಲ್ಲವೂ ನನ್ನ ಹುಚ್ಚೆಂದು ಭಾವಿಸಿ ಸಮಾಧಾನಮಾಡಿಕೊಳ್ಳ ಬೇಡ. ಬೇಕಾದರೆ ನನ್ನ ನಾಡಿಯನ್ನು ನೋಡು ; ಅದರ ಗತಿಯು ಹುಚ್ಚರ ನಾಡಿಯಂತೆ ವೇಗವಾಗಿರದೆ ಸಾಧಾರಣ ಸ್ಥಿತಿಯಲ್ಲಿದೆ. ತಾಯೇ, ನಿನ್ನ ಅಪರಾಧಗಳನ್ನು ಕುರಿತು ನೀನು ಪರಮೇಶ್ವರನಲ್ಲಿ ಕ್ಷಮಾಪಣೆ ಯನ್ನು ಬೇಡಿಕೊ. ಮುಂದೆ ಆ ನೀಚನ ಸತಿಯಾಗಿರದಿರು. ದಿವಂಗತ

ನಾದ ನಮ್ಮ ತಂದೆಯಲ್ಲಿ ಭಕ್ತಿಗೌರವಗಳನ್ನು ಇಡುವುದಾದರೆ ನೀನು ಅಂದಿಗೆ ನನ್ನ ಜನನಿಯಾಗುವೆ. ನಾನು ನಿನ್ನನ್ನು ವಂದಿಸಿ ನಿನ್ನ ಆಶೀರ್ವಾದಗಳನ್ನು ಪ್ರಾರ್ಥಿಸಿಕೊಳ್ಳುವೆನು '' ಎಂಬುದಾಗಿ ಮನ ಮರುಗಿಸುವ ರೀತಿಯಲ್ಲಿ ಕಣ್ಣೀರು ಕರೆಯುತ್ತ ಮತ್ತೆ ಮತ್ತೆ ಹೇಳಿದನು. ಆಗ ಅವಳು ತನ್ನ ಮಗನ ಅಭಿಲಾಷೆಯಂತೆ ನಡೆಯುವುದಾಗಿ ಮಾತುಕೊಟ್ಟಳು. ಹೀಗೆ ತಾಯಿ ಮಕ್ಕಳ ಅಂದಿನ ಮಾತು ಕಥೆಗಳು ಮುಗಿದುವು.

ದುರದೃಷ್ಟವಶಾತ್ ದುಡುಕಿ ತಾನು ಯಾರನ್ನು ಕೊಂದನೆಂಬುದನ್ನು ತಿಳಿಯಲು ರಾಜಕುವರನಿಗೆ ಈಗ ವ್ಯವಧಾನ ಸಿಕ್ಕಿತು. ತನ್ನಿಂದ ಸಂಹೃತನಾದವನು ತನ್ನ ಪ್ರಾಣಾಧಿಕ ಪ್ರಿಯಳಾದ ಒಫೀಲಿಯೆಯ ತಂದೆಯೆಂಬುದಾಗಿ, ತೆರೆಯಿಂದ ಹೊರಗೆ ಆ ಶವವನ್ನು ಎಳೆಯುತ್ತಲೇ ತಿಳಿಯಿತು. ಈಗ ಅವನು ಸ್ವಲ್ಪ ಶಾಂತಚಿತ್ತನಾಗಿದ್ದ ಕಾರಣ, ತನ್ನ ಮುಂದಾಲೋಚನೆಯಿಲ್ಲದ ಈ ಕೆಲಸಕ್ಕಾಗಿ ಬಹಳ ದುಃಖಿತನಾದನು. ಆ ಮಂತ್ರಿಯ ಮರಣವು ರಾಜಕುವರನನ್ನು ಸ್ವದೇಶದಿಂದ ಹೊರಕ್ಕೆ ಕಳುಹಿಸಲು ರಾಜನಿಗೆ ಒಂದು ನೆಪವಾಯಿತು. ಅವನನ್ನು ಕೊಂದುಬಿಡಬೇಕೆಂದೇ ಮನಸ್ಸು; ಆದರೆ ಪ್ರಜೆಗಳಿಗೂ ರಾಣಿಗೂ ಹೆದರಿ ಹಾಗೆ ಮಾಡಲಿಲ್ಲ. ರಾಣಿಯಲ್ಲಿ ಮತ್ತಾವ ದೋಷಗಳು ಎಷ್ಟೇ ಇದ್ದರೂ ಅವಳು ಮಗನಲ್ಲಿ ಪ್ರಾಣವನ್ನಿಟ್ಟುಕೊಂಡಿದ್ದಳು. ಆದುದರಿಂದ ಪೊಲೋನಿಯಸ್‌ನ ಮರಣ ಸಂಬಂಧವಾಗಿ ರಾಜಕುವರನನ್ನು ನ್ಯಾಯವಿಚಾರಣೆಗೆ ಗುರಿಮಾಡದಿರುವುದಕ್ಕಾಗಿಯೂ, ಅವನ ಸುರಕ್ಷೆಗಾಗಿಯೂ ರಾಜಕುವರನನ್ನು ಕಣ್ಮರೆ ಮಾಡುತ್ತೇನೆಂದು ತೋರಿಸಿಕೊಂಡು ಅವನನ್ನು ಒಂದು ಹಡಗಿನಲ್ಲಿ ಇಂಗ್ಲೆಂಡಿಗೆ ಕಳುಹಿಸಿದನು. ಆಗ ಇಂಗ್ಲೆಂಡ್ ದೇಶವು ಡೆನ್‌ಮಾರ್ಕಿಗೆ ಕಪ್ಪಕಾಣಿಕೆಗಳನ್ನು ಕೊಡುತ್ತ ಸಾಮಂತ ರಾಜ್ಯವಾಗಿತ್ತು. ಕುಬುದ್ಧಿಯ ಈ ಅರಸನು ರಾಜಕುವರನನ್ನು ಇಂಗ್ಲೆಂಡಿನಲ್ಲಿ ಹಡಗಿಳಿಯುತ್ತಲೇ, ಅಸಾಧಾರಣವಾದ ಕಾರಣವಿರುವುದರಿಂದ, ಸಂಹರಿಸುವಂತೆ ಇಂಗ್ಲೆಂಡ್ ಆಸ್ಥಾನಕ್ಕೆ ಕಾಗದ ಬರೆದು, ತನ್ನ ಆಸ್ಥಾನದ ಇಬ್ಬರು ಅಧಿಕಾರಿಗಳ ಸಹಿತ ಕಳುಹಿಸಿದ್ದನು. ರಾಜಕುವರನು ಏನೋ ದ್ರೋಹ

ತಂತ್ರವಿರುವುದೆಂದು ಸಂದೇಹಗೊಂಡಿದ್ದನಾಗಿ, ರಾತ್ರಿಯಲ್ಲಿ ಆ ಕಾಗದವನ್ನು ತೆಗೆದು ನೋಡಿ, ತನ್ನ ಹೆಸರನ್ನು ಚೆನ್ನಾಗಿ ಅಳಿಸಿ, ಅಲ್ಲಿ ಆ ಅಧಿಕಾರಿಗಳ ಹೆಸರುಗಳನ್ನು ಬರೆದು ಮತ್ತೆ ಆ ಕಾಗದವನ್ನು ಯಥಾಸ್ಥಾನದಲ್ಲಿಟ್ಟನು. ಸ್ವಲ್ಪ ಹೊತ್ತಿಗೆ ಇವರ ಹಡಗನ್ನು ಕಡಲ್ಗಳ್ಳರು ಮುತ್ತಿದರು, ಯುದ್ಧಕ್ಕೆ ಉಪಕ್ರಮವಾಯಿತು. ರಾಜಕುವರನು ತನ್ನ ಪರಾಕ್ರಮವನ್ನು ತೋರಿಸ ಲುದ್ಯುಕ್ತನಾಗಿ, ಸಾಯುಧನಾಗಿ, ಏಕಾಂಗಿಯಾಗಿ, ಶತ್ರುಗಳ ಹಡಗಿಗೆ ಹಾರಿದನು. ಆಗ ಇವನ ಹಡಗು, ಹೇಡಿತನದಿಂದ, ಇವನನ್ನು ಇವನ ಅದೃಷ್ಟಕ್ಕೆ ಒಪ್ಪಿಸಿ ತಪ್ಪಿಸಿಕೊಂಡು ಓಡಿಹೋಯಿತು. ಈ ಅಧಿಕಾರಿಗಳು ಇಂಗ್ಲೆಂಡ್ ಆಸ್ಥಾನವನ್ನು ತಲಪಿದ ಕೂಡಲೆ ಅವರ ಅರ್ಹತೆಗೆ ಅನುಗುಣ ವಾದ ಶಾಸ್ತಿಯನ್ನು ಹೊಂದುವಂತೆ ರಾಜಕುವರನು ತಿದ್ದಿದ್ದ ಕಾಗದ ವನ್ನು ತಲುಪಿಸಿ, ತಕ್ಕ ಫಲವನ್ನು ಹೊಂದಿದರು.

ಆ ಕಡಲ್ಗಳ್ಳರು ಗುಣಶಾಲಿಗಳು. ಅವರು ತಮ್ಮ ಸೆರೆಯಾಳು ಯಾರೆಂಬುದನ್ನು ಅರಿತ ಮೇಲೆ, ತಾವು ಅವನಿಗೆ ತೋರಿಸಬಹುದಾದ ಯಾವ ಸನ್ಮಾನಕ್ಕಾಗಲಿ, ಮಾಡಬಹುದಾದ ಯಾವ ಉಪಕಾರಕ್ಕಾಗಲಿ, ರಾಜಕುವರನು ಆಸ್ಥಾನದಲ್ಲಿ ತಮಗೆ ಪ್ರತಿಫಲವನ್ನುಂಟುಮಾಡಬಹುದೆಂಬ ಪ್ರತ್ಯಾಶೆಯಿಂದ, ಡೆನ್‌ಮಾರ್ಕಿಗೆ ಸಮೀಪವಾದ ಒಂದು ತೀರಪಟ್ಟಣದಲ್ಲಿ ಇಳಿಸಿದರು. ಆ ಸ್ಥಳದಿಂದ ರಾಜಕುವರನು ತಾನು ಸ್ವದೇಶಕ್ಕೆ ಹಿಂದಿರುಗು ವಂತೆ ನಡೆದ ಘಟನೆಗಳನ್ನು ವಿವರಿಸಿ, ಮರುದಿನ ಅರಸನ ದರ್ಶನಮಾಡಿ ಕೊಳ್ಳುವೆನೆಂದು ಕಾಗದ ಬರೆದು ಕಳುಹಿಸಿದನು. ಊರನ್ನು ಸೇರುತ್ತಿದ್ದ ಹಾಗೇ, ಅವನಿಗೆ ದುಃಖಜನಕವಾದ ನೋಟವೇ ಮೊದಲನೆಯದಾಗಿ ಗೋಚರವಾಯಿತು.

ಯುವತಿಯಾಗಿಯೂ, ರೂಪವತಿಯಾಗಿಯೂ ಹಿಂದೆ ಇವನಿಗೆ ಪ್ರೀತಿಸರ್ವಸ್ವಳಾಗಿಯೂ, ಇದ್ದ ಒಫೀಲಿಯೆಯ ಪ್ರೇತಸಂಸ್ಕಾರ ಕರ್ಮ ಗಳು ಆಗ ನಡೆಯುತ್ತಿದ್ದುವು. ತನ್ನ ಮುಪ್ಪಿನ ತಂದೆಯ ಮರಣವೇ ಆಕೆಯ ಮರಣಕ್ಕೆ ಕಾರಣವಾಯಿತು. ತನ್ನ ತಂದೆಯು ತನ್ನ ಮನೋವಲ್ಲಭನಿಂದ ದುರ್ಮರಣ ಪಡೆದ ವಿಚಾರವು ಮೃದುಹೃದಯಳಾದ ಆ ತರುಣಿಗೆ

ಅಸಾಧಾರಣವಾದ ಖೇದವನ್ನುಂಟುಮಾಡಿತು. ಅವಳು ತಂದೆ ಸತ್ತ ಸ್ವಲ್ಪ ಕಾಲದಲ್ಲಿಯೇ ಬುದ್ಧಿ ಸ್ವಾಧೀನ ತಪ್ಪಿ, ಆಸ್ಥಾನದ ಶ್ರೀಮಂತ ವನಿತೆಯರಿಗೆ ಹೂಗಳನ್ನು ಹಂಚುತ್ತ, ಅವು ದಿವಂಗತನಾದ ತನ್ನ ತಂದೆಯ ಸಮಾಧಿಯ ಮೇಲೆ ಇಡುವುದಕ್ಕೆಂದು ಹೇಳುತ್ತ ತಿರುಗುವಳು. ಪ್ರಣಯ ಗೀತೆಗಳನ್ನೂ ಮರಣ ಗೀತೆಗಳನ್ನೂ ಹಾಡುವಳು. ಹಲವು ತಡವೆ ಏನೇನೋ ಅರ್ಥವಾಗದ ಮಾತುಗಳನ್ನಾಡುವಳು. ಅವುಗಳನ್ನು ನೋಡಿದರೆ, ತನ್ನ ವಿಚಾರವೇ ತನಗೆ ಸಂಪೂರ್ಣವಾಗಿ ಮರೆತುಹೋಗಿದ್ದಂತೆ ತೋರುತ್ತಿತ್ತು.

ಒಂದುದಿನ ಅವಳು ಹೂವು ಪತ್ರೆಗಳನ್ನು ಹಾಕಿ ಒಂದು ಮಾಲೆಯನ್ನು ಕಟ್ಟಿಕೊಂಡು ಹೊಳೆಯ ಕಡೆಗೆ ಹೊರಟಳು ಅವಳು ಹೊರಟಿದ್ದುದನ್ನು ಮನೆಯಲ್ಲಿ ಯಾರೂ ನೋಡಲಿಲ್ಲ, ಹೊಳೆಯ ಹತ್ತಿರ ಒಂದು ನಿರವಂಜಿ ಮರವಿತ್ತು. ಅದರ ಕೊಂಬೆಗಳು ನೀರಿನ ಮೇಲೆ ಬಾಗಿ ಅದರೊಳಗೆ ಪ್ರತಿಫಲಿಸುತ್ತಿದ್ದುವು. ಒಫೀಲಿಯೆಯು ತನ್ನ ಮಾಲೆಯನ್ನು ಆ ಮರದ ಕೊಂಬೆಯೊಂದಕ್ಕೆ ನೇತುಹಾಕಬೇಕೆಂದು ಅದರ ಮೇಲೆ ಹತ್ತಿರಲು, ಅದು ಮುರಿದು ಅವಳೂ ಅವಳ ಮಾಲೆಯೂ ಇತರ ವಸ್ತುಗಳೂ ಎಲ್ಲಾ ನೀರಿನಲ್ಲಿ ಮುಗುಚಿಕೊಂಡುವು.

ಸ್ವಲ್ಪ ಹೊತ್ತು ಅವಳ ಉಡಿಗೆಯು ಅವಳನ್ನು ನೀರಿನಮೇಲೆ ತೇಲಿಸುತ್ತಿತ್ತು. ಆಗ ಅವಳು ತನ್ನ ದುಸ್ಥಿತಿಯನ್ನು ಅರಿಯದೆ, ನೀರಿನಲ್ಲಿಯೇ ಹುಟ್ಟಿಬೆಳೆದ ಜಲದೇವತೆಯಂತೆ, ಬಾಯಿಗೆ ಬಂದ ಹಳೆಯ ಹಾಡುಗಳನ್ನು ಹರುಕು ಮುರುಕಾಗಿ ಹಾಡುತ್ತಿದ್ದಳು. ಆದರೆ ಸ್ವಲ್ಪ ಹೊತ್ತಿನ ಮೇಲೆ ಉಟ್ಟಿದ್ದ ಉಡಿಗೆಯು ನೆನೆಯಲು ಹಾಡುತ್ತ ಹಾಡುತ್ತಲೇ ನೀರಿನಲ್ಲಿ ಮುಳುಗಿಹೋದಳು.

ಯುವರಾಜನು ಹಿಂದಿರುಗಿ ಬಂದಾಗ ನಡೆಯುತ್ತಿದ್ದುದೇ ಈ ಕನ್ಯೆಯ ಸಮಾಧಿಕಾರ್ಯ. ಪ್ರೇತಕರ್ಮಗಳನ್ನು ಕನ್ಯೆಯ ಅಣ್ಣನು ಮಾಡುತ್ತಿದ್ದನು. ಅಲ್ಲಿಗೆ ರಾಜನೂ ರಾಣಿಯೂ ಸಪರಿವಾರರಾಗಿ ಬಂದಿದ್ದರು. ಇದೇನೆಂಬುದೇ ಯುವರಾಜನಿಗೆ ಮೊದಲು ತಿಳಿಯದು. ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ಪ್ರಶ್ನೆಮಾಡಿದರೆ, ನಡೆಯುತ್ತಿರುವ

ಕೆಲಸಕ್ಕೆ ಅಡಚಣೆಯಾಗುವುದೆಂಬ ಯೋಚನೆಯಿಂದ ವಿಚಾರಮಾಡಲು ಆತುರಗೊಳ್ಳದೆ ಹೊರಚಾಗಿ ನಿಂತಿದ್ದನು ಪದ್ಧತಿಯಂತೆ ರಾಣಿಯು ಆ ಸಮಾಧಿಯ ಮೇಲೆ ಹೂವೆರಚುತ್ತಾ, "ಅಯ್ಯೋ ! ನಮ್ಮ ಹ್ಯಾಮ್ಲೆಟ್‌ಗೆ ನಿನ್ನನ್ನು ಮಡದಿಯಾಗಿ ಮಾಡಿಕೊಂಡು, ನಿನ್ನ ಶಯ್ಯೆಯನ್ನು ಹೂವಾಲೆಗಳಿಂದ ಅಲಂಕರಿಸಬೇಕೆಂದಿದ್ದೆನಲ್ಲಾ ! ಅದು ಹೋಗಿ ನಿನ್ನ ಸಮಾಧಿಯ ಮೇಲೆ ಹೂವೆರಚುವಂತಾಯಿತೆ !" ಎಂದು ಸಂಕಟಪಟ್ಟಳು. ಆ ಕನ್ಯೆಯ ಸಹೋದರನಾದ ಲಯರ್ಟೀಸನು ದುಃಖಾತಿರೇಕದಿಂದ ಆ ಸಮಾಧಿಯೊಳಕ್ಕೆ ಧುಮ್ಮಿಕ್ಕಿ, "ಎಲೈ ಸೇವಕರಿರಾ, ನಾನು ನನ್ನ ಸಹೋದರಿಯ ಜತೆಯಲ್ಲಿ ಸಮಾಧಿಯನ್ನು ಸೇರುವೆನು. ನನ್ನ ಮೇಲೆ ಮಣ್ಣನ್ನು ಮುಚ್ಚಿ ಪರ್ವತ ಮಾಡಿಬಿಡಿ !" ಎಂದು ಕೂಗಿದನು.

ರಾಜಕುವರನಿಗೆ ಈ ಕನ್ಯೆಯಲ್ಲಿದ್ದ ಪ್ರೀತಿಪ್ರಣಯಗಳು ಮತ್ತೆ ಉದ್ಬುದ್ಧವಾದುವು. ಕೇವಲ ಸಹೋದರ ಮಾತ್ರನಾದವನು ಈ ಮಟ್ಟಿಗೆ ದುಃಖಕ್ಕೊಳಗಾಗಿ ತಾನು ಸುಮ್ಮನೆ ನಿಂತಿರುವುದು ಅವನಿಗೆ ಸರಿಯಾಗಿ ತೋರಲಿಲ್ಲ. ತನಗೆ ಆಕೆಯಲ್ಲಿರುವ ಪ್ರೀತಿಗೆ ಸಮಾನವಾದಷ್ಟು ಪ್ರೀತಿಯು ಇನ್ನು ಯಾರಿಗೂ ಇರಲಾಗದೆಂದೂ, ನಲವತ್ತು ಸಹಸ್ರ ಸಹೋದರರ ಪ್ರೀತಿಯನ್ನೆಲ್ಲಾ ಒಟ್ಟುಗೂಡಿಸಿದರೂ ತನ್ನ ಪ್ರೀತಿಯು ಅದಕ್ಕೂ ಮಿಗಿಲಾಗುವುದೆಂದೂ, ಹೇಳಿಕೊಳ್ಳುತ್ತಾ, ಮೊದಲೇ ಹುಚ್ಚನಂತೆ ಕಾಣುತ್ತಿದ್ದ ಇವನು ಮತ್ತಷ್ಟು ಹುಚ್ಚನಾದನೋ ಎನ್ನುವಂತೆ, ಆ ಸಮಾಧಿಯೊಳಕ್ಕೆ ಧುಮ್ಮಿಕ್ಕಿದನು ಹೀಗೆ ಧುಮ್ಮಿಕ್ಕಿದವನು ಯಾರೆಂಬುದನ್ನು ಲಯರ್ಟೀಸನು ತಿಳಿದ ಒಡನೆಯೇ, ತನ್ನ ತಂದೆಯ ಮತ್ತು ಸಹೋದರಿಯ ಅಕಾಲಮರಣಕ್ಕೆ ಕಾರಣನಾದ ಇವನನ್ನು ಶತ್ರುವೆಂದು ಭಾವಿಸುತ್ತಾ, ಅವನ ಕುತ್ತಿಗೆಯನ್ನು ಬಲವಾಗಿ ಹಿಡಿದುಕೊಂಡನು. ಅದೃಷ್ಟವಶಾತ್ ಸಮೀಪದಲ್ಲಿದ್ದ ಆಳುಗಳು ಇವರನ್ನು ಜಾಗ್ರತೆಯಾಗಿ ಬಿಡಿಸಿದರು. ಅನಂತರ ಸಮಾಧಿಕಾರ್ಯಗಳೆಲ್ಲಾ ನೆರವೇರಿದುವು. ಲಯರ್ಟೀಸನ ದ್ವಂದ್ವಯುದ್ಧಕ್ಕೋ ಎನ್ನುವಂತೆ ತಾನು ಸಮಾಧಿಯೊಳಕ್ಕೆ ಧುಮ್ಮಿಕ್ಕಿದುದು ತಿಳಿಗೇಡಿತನವಾಯಿತೆಂದು ರಾಜಕುವರನು ಪಶ್ಚಾತ್ತಾಪಪಟ್ಟನು.

ಒಫೀಲಿಯೆಯ ಮೇಲಣ ಅನುರಾಗವೇ ಇದಕ್ಕೆ ಕಾರಣವೆಂದು ಗೊತ್ತಾದ ಮೇಲೆ ಈ ಯುವಕರಿರ್ವರೂ ಪರಸ್ಪರ ಅಪರಾಧಗಳನ್ನು ಮರೆತು ಕೆಲವು ಕಾಲ ಹಿತವಾಗಿದ್ದರು.

ಆದರೂ ಲಯರ್ಟೀಸನಿಗೆ ತಂದೆಯ ಮತ್ತು ಸಹೋದರಿಯ ಮರಣಕ್ಕಾಗಿ ದುಃಖವೂ, ರಾಜಕುವರನ ಮೇಲೆ ಕೋಪವೂ ಇದ್ದೇ ಇತ್ತು. ಕ್ಲಾಡಿಯಸ್ಸನು ಅವನ ಕೋಪವನ್ನೂ ದುಃಖವನ್ನೂ ರಾಜಕುವರನ ನಾಶಕ್ಕಾಗಿ ಉಪಯೋಗಿಸಿಕೊಳ್ಳಲು ಸಂಚುಮಾಡಿದನು. ಲಯರ್ಟೀಸನು ಹಿಂದಿನ ದುಃಖವನ್ನೂ ಕೋಪವನ್ನೂ ಮರೆತು ಸ್ನೇಹವಾಗಿರುವಂತೆ ಕಾಣಿಸಿಕೊಳ್ಳುತ್ತ, ಕತ್ತಿಯ ಕಾಳಗದಲ್ಲಿ ಉಭಯರೂ ತಮ್ಮ ತಮ್ಮ ಯುಕ್ತಿಚಮತ್ಕಾರಗಳನ್ನು ತೋರಿಸಲು ವಿನೋದವಾದ ದ್ವಂದ್ವಯುದ್ಧ ಮಾಡುವುದಕ್ಕೆ ಬರುವಂತೆ ರಾಜಕುವರನನ್ನು ಕೇಳಿಕೊಂಡನು. ಈ ದ್ವಂದ್ವಯುದ್ಧಕ್ಕೆ ಒಂದು ದಿನವು ಗೊತ್ತಾಯಿತು. ಅದನ್ನು ನೋಡಲು ಅರಸನೂ ಅರಸಿತಿಯೂ ಪರಿವಾರವೂ ಸೇರಿದರು. ಅರಸನ ಅಪ್ಪಣೆಯಂತೆ ಲಯರ್ಟೀಸನು ಕತ್ತಿಯಕೊನೆಗೆ ತೀಕ್ಷ್ಣವಾದ ವಿಷವನ್ನು ಸವರಿದ್ದನು. ಕತ್ತಿಯ ಸಾಧನೆಯಲ್ಲಿಯೂ ದ್ವಂದ್ವಯುದ್ಧದಲ್ಲಿಯೂ ಈ ಯುವಕರಿಬ್ಬರೂ ಸಮಭಟರೆಂದು ಪ್ರಖ್ಯಾತರಾಗಿದ್ದರು. ಆದುದರಿಂದ ಪ್ರೇಕ್ಷಕರು ಈ ಯುವಕರಲ್ಲಿ ಒಬ್ಬೊಬ್ಬನ ಗೆಲುವಿನ ವಿಚಾರಕ್ಕೂ ಅಮೂಲ್ಯವಾದ ಪಂದ್ಯವನ್ನು ಒಡ್ಡುತ್ತಾ ಬಂದರು. ಇಂತಹ ದ್ವಂದ್ವಯುದ್ಧಗಳಲ್ಲಿ ಹರಿತವಲ್ಲದ ಮೊನಚಲ್ಲದ ಕತ್ತಿಗಳನ್ನು ಉಪಯೋಗಿಸುವುದು ನಿಯಮ. ಲಯರ್ಟೀಸನ ಘಾತುಕತನದ ವಿಚಾರದಲ್ಲಿಯಾಗಲಿ, ಅವನ ಆಯುಧದ ವಿಚಾರದಲ್ಲಿಯಾಗಲಿ ರಾಜಕುವರನಿಗೆ ಸಂದೇಹವಿರಲಿಲ್ಲವಾಗಿ, ಯಾವುದನ್ನೂ ಪರೀಕ್ಷಿಸದೆ ತಾನು ಹತ್ತಿರದಲ್ಲಿದ್ದ ಒಂದು ಚೂಪಲ್ಲದ ಕತ್ತಿಯನ್ನು ತೆಗೆದುಕೊಂಡನು.

ಕಾಳಗಕ್ಕೆ ಮೊದಲಾಯಿತು. ಲಯರ್ಟೀಸನು ಮೊದಮೊದಲು ಯುವರಾಜನೇ ಗೆಲ್ಲುವಂತಹ ಸಂಧಿಯನ್ನು ಉಂಟುಮಾಡುತ್ತ ಬಂದನು. ಮೋಸಗಾರನಾದ ಆ ದುರುಳರಸನು ಆ ಸನ್ನಿವೇಶವನ್ನು ಅಪಾರವಾಗಿ ಹೊಗಳುತ್ತ, ಅಮೂಲ್ಯವಾದ ಪಂದ್ಯವಿಡುತ್ತ, ಯುವರಾಜನಿಗೆ ಉತ್ತೇಜನ

ಕೊಡುವವನಂತೆ ಕೋಲಾಹಲದಿಂದ "ಯುವರಾಜನಿಗೆ ವಿಜಯವಾಗಲಿ!" ಎಂದು ಕೂಗುತ್ತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಲಯರ್ಟೀಸನು ಉದ್ವೇಗಗೊಂಡು ವಿಷಯುಕ್ತವಾದ ತನ್ನ ಆಯುಧದಿಂದ ಯುವರಾಜನನ್ನು ತಿವಿದನು. ಹ್ಯಾಮ್ಲೆಟನೂ ಉದ್ವೇಗಗೊಂಡನು. ಆಮೇಲಿನ ಹೋರಾಟ ದಲ್ಲಿ ಅವರ ಕತ್ತಿಗಳು ಬದಲಾಗಿ ಹ್ಯಾಮ್ಲೆಟನ ಕೈಗೆ ವಿಷಹತ್ತಿಸಿದ ಕತ್ತಿಯು ಸಿಕ್ಕಿತು ಅವನಿಗೆ ಆ ಕತ್ತಿಯ ಸ್ವರೂಪವು ತಿಳಿಯದು. ಆದ್ದರಿಂದ ಮತ್ತೆ ದ್ವಂದ್ವಯುದ್ಧಕ್ಕೆ ಉಪಕ್ರಮವಾದಾಗ ಯುವರಾಜನು ತನ್ನ ಪ್ರತಿಭಟನನ್ನು ಅದರಿಂದ ತಿವಿದನು. ಹೀಗೆ ಲಯರ್ಟೀಸನು ತನ್ನ ವಿಶ್ವಾಸಘಾತುಕತನಕ್ಕಾಗಿ ತನ್ನ ಸ್ವಂತ ಆಯುಧದಿಂದಲೇ ಪ್ರಾಯ ಶ್ಚಿತ್ತವನ್ನು ಹೊಂದಿದನು.

ಒಂದು ವೇಳೆ ಈ ದ್ವಂದ್ವಯುದ್ಧದಲ್ಲಿ ಯುವರಾಜನು ಬದುಕಿ ಬಂದರೆ, ವಿಜಯಶಾಲಿಯಾದ ಅವನಿಗೆ ಅಭಿನಂದನ ಪೂರ್ವಕವಾಗಿ ಕೊಡಲು ಒಂದು ಪಾನೀಯವನ್ನು ಅರಸನು ಸಿದ್ಧಪಡಿಸಿ ಅದಕ್ಕೆ ವಿಷಹಾಕಿ ಇಟ್ಟಿದ್ದನು. ಲಯರ್ಟೀಸನ ಕೈಯಿಂದ ಸಾಯದಿದ್ದರೆ ಇದನ್ನು ಕುಡಿ ದಾದರೂ ಸತ್ತುಹೋಗಲಿ ಎಂಬುದು ಅವನ ಆಶಯವಾಗಿತ್ತು. ಆದರೆ ಈ ವಿಚಾರವನ್ನು ಅರಿಯದ ಅರಸಿಯು ಅದನ್ನು ಕುಡಿದು, ಕೂಡಲೆ, ತನಗೆ ವಿಷಪ್ರಯೋಗವಾಗಿದೆಯೆಂದು ಪ್ರಲಾಪಿಸುತ್ತ ಮೃತಳಾದಳು.

ಯುವರಾಜನು ಏನೋ ಘಾತುಕ ಕೃತ್ಯವು ನಡೆಯುತ್ತಿರುವುದಾಗಿ ಸಂಶಯಗೊಂಡು ಬಾಗಿಲುಗಳನ್ನು ಮುಚ್ಚುವಂತೆ ಅಪ್ಪಣೆಮಾಡಿ ವಿದ್ಯ ಮಾನಗಳನ್ನು ಅರಿಯಲು ಪ್ರಯತ್ನಿಸತೊಡಗಿದನು. ಲಯರ್ಟೀಸನು "ಯುವರಾಜ! ಈಗ ವಿಚಾರಮಾಡತೊಡಗಬೇಡ. ನಾನೇ ಘಾತುಕನು. ನಿನ್ನ ಕೈಯಿಂದಾದ, ನನ್ನ ಸ್ವಂತ ಶಸ್ತ್ರಘಾತದಿಂದ ನಾನು ಮರಣೋನ್ಮುಖಿ ನಾಗಿದ್ದೇನೆ. ನನ್ನ ಪಾಪ ಕರ್ಮ ಫಲವನ್ನು ನಾನು ಅನುಭವಿಸುವೆನು. ನಾನು ನಿನ್ನನ್ನು ತಿವಿದ ಆಯುಧದ ಕೊನೆಯು ವಿಷಲಿಪ್ತವಾಗಿತ್ತು. ನೀನೂ ಇನ್ನು ಅರ್ಧ ಗಳಿಗೆಯ ಕಾಲವೂ ಜೀವಿಸಿರಲಾರೆ. ಯಾವ ಮಣಿ ಮಂತ್ರೌ ಷಧಗಳೂ ಈ ವಿಷಕ್ಕೆ ಪ್ರತಿಕ್ರಿಯೆಯಾದವುಗಳಲ್ಲ. ನನ್ನ ಅಪರಾಧವನ್ನು

ಮನ್ನಿಸು. ಅಯ್ಯೋ! ನೀಚರಾಜನೇ! ಏನು ಅನರ್ಥವನ್ನು ತಂದಿಟ್ಟೆ!" ಎನ್ನುತ್ತ ಮೃತನಾದನು.

ಯುವರಾಜನ ಅವಸಾನಕಾಲವು ಕ್ಷಣಕ್ಷಣಕ್ಕೆ ಸಮೀಪವಾಗುತ್ತಿತ್ತು. ಆ ಕತ್ತಿಯ ಮೇಲೆ ಇನ್ನೂ ಸ್ವಲ್ಪ ವಿಷವಿರುವುದನ್ನು ಅವನು ನೋಡಿದನು. ತತ್‌ಕ್ಷಣವೇ ಮೋಸಗಾರನಾದ ತನ್ನ ಚಿಕ್ಕಪ್ಪನ ಕಡೆಗೆ ತಿರುಗಿ, ಆ ಆಯುಧದ ಅಗ್ರದಿಂದ ಅವನ ಹೃದಯವನ್ನಿರಿದನು. ಅಂತೂ ಹೀಗೆ ತನ್ನ ತಂದೆಯನ್ನು ಅಕಾರಣವಾಗಿ ಅತಿನೀಚತನದಿಂದ ಕೊಂದ ಈ ಘಾತುಕನನ್ನು ಸಂಹರಿಸಿ, ತನ್ನ ತಂದೆಯ ಭೂತಾತ್ಮನಿಗೆ ಕೊಟ್ಟಿದ್ದ ವಾಗ್ದಾನವನ್ನು ನೆರವೇರಿಸಿದನು.

ಆಮೇಲೆ, ಈ ಪರಮದಾರುಣವಾದ ಪರ್ಯವಸಾನವನ್ನೆಲ್ಲಾ ನೋಡುತ್ತ ಸಮೀಪದಲ್ಲಿ ನಿಂತಿದ್ದ ಹೊರೇಷಿಯೋವಿನ ಕಡೆಗೆ ತಿರುಗಿಕೊಂಡನು. ಈ ವೇಳೆಗೆ ತನಗೆ ಪ್ರಾಣವು ಕಂಠಗತವಾಗುತ್ತಿತ್ತು.

ಹೊರೇಷಿಯೋವು ಆತ್ಮಹತ್ಯ ಮಾಡಿಕೊಂಡು ತನ್ನ ಸ್ನೇಹಿತನನ್ನು ಹಿಂಬಾಲಿಸುವುದಾಗಿ ಸೂಚಿಸಲು, ಯುವರಾಜನು "ಅಯ್ಯಾ ಮಿತ್ರನೇ, ಪ್ರಪಂಚಕ್ಕೆ ಈ ಕಥೆಯನ್ನು ಯಥಾರ್ಥವಾಗಿ ತಿಳಿಸಲು ನೀನು ಬದುಕಿರಬೇಕು. ದಯಮಾಡಿ ಹಾಗೆ ಮಾಡುವುದಾಗಿ ನನಗೆ ಮಾತುಕೊಡು" ಎಂದು ಪ್ರಾರ್ಥಿಸಿಕೊಂಡನು. ಆಗ ಹೊರೇಷಿಯೋ ತನ್ನ ಸ್ನೇಹಿತನ ಅವಸಾನ ಕೋರಿಕೆಯಂತೆ ಆ ಸಮಸ್ತ ವಿದ್ಯಮಾನವನ್ನೂ ಸ್ವಲ್ಪವೂ ಲೋಪವಿಲ್ಲದೆ ಪ್ರಪಂಚಕ್ಕೆ ಹೇಳುವುದಾಗಿ ಮಾತುಕೊಟ್ಟನು.

ಈ ವಾಗ್ದಾನದಿಂದ ತೃಪ್ತನಾದ ಯುವರಾಜನ ಆತ್ಮವು ಶಾಂತವಾಗಿ ಪರಲೋಕಕ್ಕೆ ತೆರಳಿತು. ಹೊರೇಷಿಯೋವೂ ಸಮೀಪದಲ್ಲಿದ್ದ ಇತರರೂ ದುಃಖಾತಿಶಯದಿಂದ ಕಣ್ಣೀರು ಕರೆಯುತ್ತ, ಗದ್ಗದ ಕಂಠರಾಗಿ, "ಪರಮಾತ್ಮನೇ, ಗುಣಾಢ್ಯನಾದ ರಾಜಕುವರನ ಆತ್ಮಕ್ಕೆ ಶಾಂತಿ ಸಮೃದ್ಧಿಗಳನ್ನು ಕೃಪೆಮಾಡು" ಎಂದು ಪ್ರಾರ್ಥಿಸಿದರು. ಈ ರಾಜಕುವರನು ಸಕಲರ ಪ್ರೀತಿ ಸನ್ಮಾನಗಳಿಗೂ ಪಾತ್ರವಾಗುವ ಘನತೆಯುಳ್ಳವನಾಗಿದ್ದನು. ಇವನ ಸುಗುಣಸಂಪತ್ತಿಯೂ ರಾಜಾರ್ಹವಾದ ಯೋಗ್ಯ

ತೆಯೂ ಇವನನ್ನು ಪ್ರಜಾನುರಾಗಪಾತ್ರನನ್ನಾಗಿ ಮಾಡಿದ್ದುವು. ಇವನು ಜೀವಂತನಾಗಿದ್ದಿದ್ದರೆ ಸಂದೇಹವಿಲ್ಲದೆ ಡೆನ್‌ಮಾರ್ಕಿಗೆ ಸರ್ವತೋಮುಖ ವಾದ ಪರಿಪೂರ್ಣತೆಯುಳ್ಳ ರಾಜಾಧಿರಾಜನೇ ಆಗುತ್ತಿದ್ದನು.

---

# ಮ್ಯಾಕ್‌ಬೆತ್

---

ಡನ್‌ಕನ್ ಎಂಬಾತನು ಸ್ಕಾಟ್ಲೆಂಡ್ ದೇಶದ ಅರಸನಾಗಿದ್ದಾಗ ಆತನ ಆಸ್ಥಾನದಲ್ಲಿ ಮ್ಯಾಕ್‌ಬೆತ್ ಎಂಬ ಒಬ್ಬ ಶ್ರೀಮಂತನಿದ್ದನು. ಅವನು ಅರಸಿಗೆ ಸಮೀಪ ಬಂಧುವಾಗಿಯೂ, ತನ್ನ ಪರಾಕ್ರಮದಿಂದಲೂ ಯುದ್ಧ ವಿದ್ಯಾನಿಪುಣತೆಯಿಂದಲೂ ಪ್ರಖ್ಯಾತಿ ಪಡೆದು ಆಸ್ಥಾನದಲ್ಲಿ ವಿಶೇಷ ಸನ್ಮಾನಗಳಿಗೆ ಪಾತ್ರನಾಗಿಯೂ ಇದ್ದನು.

ಇವನು ಈಚೆಗೆ ಒಂದು ಸಾರಿ ನಾರ್ವೇ ದೇಶೀಯರ ಅಪಾರವಾದ ದಂಡಿನ ಸಹಾಯ ಪಡೆದಿದ್ದ ಒಂದು ಅರಾಜಕ ಸಂಗಡದ ದಂಡನ್ನು ಸೋಲಿಸಿ, ತನ್ನ ಜೊತೆಯ ಅಧಿಕಾರಿಯಾದ ಬ್ಯಾಂಕೋವಿನೊಡನೆ ರಾಜ ಧಾನಿಗೆ ಬರುತ್ತಿದ್ದನು. ಅವರು ಒಂದು ಗಹನವಾದ ಕಾಡಿನಲ್ಲಿ ಹಾದು ಬರಬೇಕಾಗಿತ್ತು. ಆ ಹಾದಿಯಲ್ಲಿ ಸ್ವಲ್ಪದೂರ ಬರುತ್ತಲೇ ಅವರು ಸ್ತ್ರೀಯಾಕೃತಿಯ ಮೂರು ವಿಚಿತ್ರ ವ್ಯಕ್ತಿಗಳನ್ನು ಕಂಡು ಸ್ತಂಭೀಭೂತ ರಾದರು. ಆ ಆಕೃತಿಗಳನ್ನು ಸ್ತ್ರೀವ್ಯಕ್ತಿಗಳೆಂದು ಹೇಳುವಂತಿದ್ದರೂ ಅವುಗಳಿಗೆ ಗಡ್ಡಗಳು ಬೆಳೆದಿದ್ದುವು. ಕಳೆಗುಂದಿದ ಸುಕ್ಕು ಹಿಡಿದ ಆ ದೇಹವನ್ನೂ ವಿಕಾರವಾದ ಅವರ ಉಡುಗೆಯನ್ನೂ ನೋಡಿದರೆ ಅವುಗಳು ಈ ಲೋಕದ ಯಾವ ಪ್ರಾಣಿಯಂತೆಯೂ ಕಾಣುತ್ತಿರಲಿಲ್ಲ.

ಮ್ಯಾಕ್‌ಬೆತನೇ ಅವರನ್ನು ಮೊದಲು ಮಾತನಾಡಿಸಿದನು. ಇದರಿಂದ ಅವರು ಅಸಮಾಧಾನಪಟ್ಟವರಂತೆ ತೋರಿಸಿಕೊಂಡು, ತಮ್ಮ ಮೋಟು ಬೆರಳನ್ನು ಒಣಕಲ ತುಟಿಯಮೇಲಿಟ್ಟು, ಮೌನವನ್ನು ಸೂಚಿಸಿ ಹೀಗೆಂದರು :-

ಮೊದಲನೆಯ ವ್ಯಕ್ತಿ—"ಮ್ಯಾಕ್‌ಬೆತ್, ಗ್ಲಾಮಿಸ್‌ನ ಒಡೆಯಾ ನಿನಗೆ ಸಮಸ್ತ ಸನ್ಮಂಗಳಗಳೂ ಉಂಟಾಗಲಿ."

ಎರಡನೆಯ ವ್ಯಕ್ತಿ—"ಮ್ಯಾಕ್‌ಬೆತ್, ಕಾಡರ್‌ನ ಪ್ರಭುವೇ, ನಿನಗೆ ಸಮಸ್ತ ಸನ್ಮಂಗಳಗಳೂ ಉಂಟಾಗಲಿ."

ಈ ಪದವಿಗಳಿಗೆ ಇವನಿಗೆ ಯಾವ ಬಾಧ್ಯತೆಯೂ ಇರಲಿಲ್ಲವಾದುದರಿಂದ ಇವನ ಮುಖದಲ್ಲಿ ಸ್ವಲ್ಪ ವಿಕಾಸವೂ ವೈವರ್ಣ್ಯವೂ ಉಂಟಾದುವು.

ಮೂರನೆಯ ವ್ಯಕ್ತಿ—"ಉತ್ತರೋತ್ತರ ಅರಸನಾಗುವ ಮ್ಯಾಕ್‌ಬೆತ್‌ನೇ, ನಿನಗೆ ಸಮಸ್ತ ಸನ್ಮಂಗಳಗಳೂ ಉಂಟಾಗಲಿ."

ಮ್ಯಾಕ್‌ಬೆತ್‌ನು ಈ ಮಾತಿನಿಂದ ಬೆಚ್ಚಿ ಬೆಂಡಾದನು. ಅರಸನ ಮಕ್ಕಳು ಜೀವಂತರಾಗಿರುವಲ್ಲಿ ತನಗೆ ಅರಸುತನವು ದೊರೆಯುವುದು ಅಸಂಭವ. ಆದ್ದರಿಂದ ಭವಿಷ್ಯೋಕ್ತಿಯಂತಿದ್ದ ಈ ಮಾತನ್ನು ಕೇಳಿ ಅವನು ಬೆಚ್ಚಿ ಬೆರಗಾದದ್ದು ಏನೂ ಆಶ್ಚರ್ಯವಲ್ಲ.

ಅನಂತರ ಆ ವ್ಯಕ್ತಿಗಳು ಬ್ಯಾಂಕೋವಿನ ಕಡೆಗೆ ತಿರುಗಿ, ಒಂದು ಬಗೆಯ ಸಮಸ್ಯೆಯಂತೆ "ನೀನು ಮ್ಯಾಕ್‌ಬೆತ್‌ಗಿಂತ ನಿಕೃಷ್ಟನಾದರೂ ಉತ್ಕೃಷ್ಟ. ಅಷ್ಟು ಸುಖಿಯಲ್ಲವಾದರೂ ಅಧಿಕ ಸುಖಿ. ನೀನು ಅರಸನಾಗದಿದ್ದರೂ ನಿನ್ನ ವಂಶೀಯರು ನಿನ್ನ ಅನಂತರ ಸ್ಕಾಟ್‌ಲೆಂಡ್ ದೊರೆಗಳಾಗುವರು. ನಿನಗೆ ಜಯವಾಗಲಿ" ಎಂದು ಅಂತರ್ಧಾನವಾದರು. ಇದನ್ನು ನೋಡಿದ ಆ ಸೇನಾನಾಯಕರು ಇವರನ್ನು ವಿಧಿವ್ಯಕ್ತಿಗಳು ಅಥವಾ "ಮಂತ್ರಗಾತಿಯರು" ಎಂದು ತಿಳಿದುಕೊಂಡರು.

ಈ ವಿಚಿತ್ರ ಸಂದರ್ಭವನ್ನು ಕುರಿತು ಇವರು ಯೋಚಿಸುತ್ತಿರುವ ವೇಳೆಗೆ, ರಾಜನಿಂದ ಅಧಿಕೃತರಾದ ಕೆಲವು ರಾಜದೂತರು ಬಂದು ಮ್ಯಾಕ್‌ಬೆತ್‌ನನ್ನು ಕುರಿತು "'ಕಾಡರ್‌ನ ಪ್ರಭು' ಎಂಬ ಪದವಿಯನ್ನೂ ಸಂಭಾವನೆಯನ್ನೂ ರಾಜನು ತಮಗೆ ಅನುಗ್ರಹಿಸಿರುವನು" ಎಂದರು. ಈ ವಿದ್ಯಮಾನವು ಆ ಮಂತ್ರಗಾತಿಯರು ಹೇಳಿದ ಭವಿಷ್ಯೋಕ್ತಿಗೆ ಅನುಗುಣವಾಗಿತ್ತು. ಇದರಿಂದ ಮ್ಯಾಕ್‌ಬೆತ್‌ನು ಆನಂದಾಶ್ಚರ್ಯಪರವಶನಾಗಿ, ಆ ರಾಜದೂತರಿಗೆ ಏನೊಂದು ಉತ್ತರವನ್ನೂ ಹೇಳಲಾರದೆ ಸ್ತಂಭದಂತೆ

ನಿಂತುಬಿಟ್ಟನು. ಆ ಕ್ಷಣದಲ್ಲಿಯೇ ಮೂರನೆಯ ಮಂತ್ರವಾದಿನಿಯು ಹೇಳಿದ ಭವಿಷ್ಯವೂ ನೆರವೇರಬಹುದೆಂದೂ, ತಾನು ಒಂದು ದಿನ ಸ್ಕಾಟ್ಲೆಂಡಿನ ರಾಜನಾಗಬಹುದೆಂದೂ ಆಸೆಯು ಅವನಲ್ಲಿ ಉಕ್ಕಿಉಕ್ಕಿ ಬರುತ್ತಿತ್ತು.

ಆಗ ಮ್ಯಾಕ್‌ಬೆತ್‌ನು ಬ್ಯಾಂಕೋವಿನ ಕಡೆಗೆ ತಿರುಗಿಕೊಂಡು, "ಆ ಮಂತ್ರಗಾತಿಯರು ನನಗೆ ಹೇಳಿದ ಭವಿಷ್ಯವು ಹೀಗೆ ಬಹು ಆಶ್ಚರ್ಯಕರವಾಗಿ ನಡೆದಿರುವುದರಿಂದ ಮುಂದೆ ಈ ರಾಜ್ಯಕ್ಕೆ ನಿನ್ನ ಮಕ್ಕಳು ರಾಜರಾಗುವರೆಂದು ನಿನಗೆ ಆಸೆಯುಂಟಾಗಿಲ್ಲವೇ ?" ಎಂದನು. ಬ್ಯಾಂಕೋವು "ಆ ಆಸೆಯು ನಿನ್ನನ್ನು ಸಿಂಹಾಸನದ ಸಂಪಾದನೆಗೆ ಉತ್ತೇಜನಗೊಳಿಸಬಹುದು. ಆದರೆ ಈ ತಾಮಸೀ ಮಂತ್ರಗಾತಿಯರು ಅನೇಕವೇಳೆ ನಮ್ಮನ್ನು ಮಹತ್ಪರಿಣಾಮಗಳುಳ್ಳ ಕಾರ್ಯಗಳಲ್ಲಿ ಸಿಕ್ಕಿಸಲೋಸುಗ ಅಲ್ಪವಿಚಾರಗಳಲ್ಲಿ ನಿಶ್ಚಯವನ್ನೇ ಹೇಳುವರು" ಎಂದನು. ಮ್ಯಾಕ್‌ಬೆತ್‌ನ ಹೃದಯದಲ್ಲಿ ಆ ನೀಚ ಮಂತ್ರಗಾತಿಯರು ಹೇಳಿದ ಭವಿಷ್ಯವಾದವು ಬೇರೂರಿಬಿಟ್ಟಿತ್ತು. ಆದ್ದರಿಂದ ಗುಣವಂತನಾದ ಬ್ಯಾಂಕೋವು ಹೇಳಿದ ವಿವೇಕವೂ ಎಚ್ಚರಿಕೆಯ ಮಾತುಗಳೂ ಅವನ ಮನಸ್ಸಿಗೆ ಹಿಡಿಯಲಿಲ್ಲ. ಅದು ಮೊದಲು "ಸ್ಕಾಟ್ಲೆಂಡ್ ಸಿಂಹಾಸನವನ್ನು ಪಡೆದುಕೊಳ್ಳುವುದಕ್ಕೇನು ಮಾಡಬೇಕು ?" ಎಂಬುದೇ ಅವನ ಆಲೋಚನೆಯಾಯಿತು.

ಮ್ಯಾಕ್‌ಬೆತ್‌ನು ತನ್ನ ಮಡದಿಗೆ ಆ ಮಂತ್ರಗಾತಿಯರು ತಿಳಿಸಿದ ಅಪೂರ್ವ ಭವಿಷ್ಯೋಕ್ತಿಯನ್ನೂ, ಅವುಗಳಲ್ಲಿ ಸ್ವಲ್ಪ ಭಾಗವು ನೆರವೇರಿದುದನ್ನೂ ಸಮಗ್ರವಾಗಿ ಹೇಳಿದನು. ಇವಳು ಅತಿ ನೀಚಸ್ವಭಾವದವಳು; ದುರಾಶಾಪರಳು. ತಾನೂ ತನ್ನ ಪತಿಯೂ ಉನ್ನತ ಪದವಿಗೆ ಬರುವುದಾದರೆ, ಕಾರ್ಯಸಾಧನೆಯ ಮಾರ್ಗವು ಹೇಗಾದರೂ ಇರಲಿ ಅದನ್ನು ಲಕ್ಷ್ಯಮಾಡತಕ್ಕವಳಾಗಿರಲಿಲ್ಲ. ಆದ್ದರಿಂದ ಮ್ಯಾಕ್‌ಬೆತ್‌ನು ಹಿಂದುಮುಂದು ನೋಡುತ್ತ ಅನುಮಾನಪಡುತ್ತ ಇದ್ದ ಕೆಲಸವನ್ನು ಅವಳು ಮುಂದುಮಾಡಿದಳು; ಭವಿಷ್ಯವಾಣಿಯು ಸಿದ್ಧಿಸಬೇಕಾದರೆ ರಾಜನನ್ನು ಕೊಲ್ಲಬೇಕೆಂದೂ, ಅದು ಅತ್ಯವಶ್ಯವೆಂದೂ. ಸಂತತವಾಗಿ ಬೋಧಿಸ

ತೊಡಗಿದಳು. ಆದರೆ, ಕೊಲೆಯೆಂದರೆ ಮ್ಯಾಕ್‌ಬೆತ್‌ನು ಹಿಂತೆಗೆಯುತ್ತಿದ್ದನು. ಅವನ ಅಂತರಾತ್ಮವು ಖತಿಗೊಂಡು ಕೊರಗುತ್ತಿತ್ತು.

ಡನ್‌ಕನ್ ರಾಜನು ತನ್ನ ಆಸ್ಥಾನದ ಮುಖ್ಯ ಶ್ರೀಮಂತರ ಮನೆಗೆ ಆಗಾಗ್ಗೆ ಹೋಗಿಬರುವ ಪದ್ಧತಿಯನ್ನಿಟ್ಟುಕೊಂಡಿದ್ದನು. ಹಾಗೆಯೇ ಒಂದು ದಿನ ಆತನು ಹಿಂದೆ ನಡೆದ ಯುದ್ಧಗಳಲ್ಲಿ ಮ್ಯಾಕ್‌ಬೆತ್‌ನಿಗೆ ಉಂಟಾದ ವಿಜಯಕ್ಕಾಗಿ ಅವನನ್ನು ಗೌರವಿಸಬೇಕೆಂಬ ಕುತೂಹಲದಿಂದ ಪುತ್ರ ಪರಿವಾರ ಸಹಿತನಾಗಿ ಮ್ಯಾಕ್‌ಬೆತ್‌ನ ಭವನಕ್ಕೆ ಹೋದನು.

ಮ್ಯಾಕ್‌ಬೆತ್‌ನ ಭವನವು ಬಹಳ ರಮ್ಯವಾದ ಸ್ಥಳದಲ್ಲಿತ್ತು. ಅದರ ಸುತ್ತಲೂ ವಾಯುವು ಪರಿಶುದ್ಧವಾಗಿಯೂ ಮನೋಹರವಾಗಿಯೂ ಇತ್ತು. ಆ ಭವನದ ಸೂರು, ಸಂದು, ಚಿತ್ರ, ಗೋಪುರ ಮುಂತಾಗಿ ಅವಕಾಶವಿರುವ ಕಡೆಗಳಲ್ಲೆಲ್ಲಾ ಬಾನಹಕ್ಕಿಗಳು ಗೂಡುಮಾಡಿಕೊಂಡಿದ್ದುವು. ಇವು ಹೆಚ್ಚಾಗಿ ಇರುವ ಕಡೆ ವಾಯುಗುಣವು ಬಲು ಚೆನ್ನಾಗಿರುವುದೆಂದು ಹೇಳುತ್ತಾರೆ. ಇಂಥ ಸ್ಥಳಕ್ಕೆ ಬರುತ್ತಿದ್ದ ಹಾಗೇ ಅರಸನಿಗೆ ಬಹು ಸಂತೋಷವಾಯಿತು. ಮನೆಯ ಯಜಮಾನಿಯು ಮಾಡಿದ ಆದರೋಪಚಾರಗಳಿಂದ ಅದು ಅಧಿಕವಾಯಿತು. ಆದರೆ ಆಕೆಯು ಮಹಾ ಕುಟಿಲೆ; ದ್ರೋಹಿ, ತನ್ನ ದ್ರೋಹವನ್ನು ಮುಗುಳುನಗೆಗಳಲ್ಲಿ ಮುಚ್ಚಿ, ಕುಸುಮದ ಹಿಂದೆ ಇದ್ದ ಕೀಟದಂತೆ, ಪ್ರಸನ್ನಳಾಗಿ ಕಾಣಿಸಿಕೊಳ್ಳುತ್ತಿದ್ದಳು.

ರಾಜನು ಈ ಪ್ರಯಾಣದ ಆಯಾಸದಿಂದ ಬಳಲಿದ್ದ ಕಾರಣ ಜಾಗ್ರತೆಯಾಗಿ ನಿದ್ರೆಮಾಡುವುದಕ್ಕಾಗಿ ಹೊರಟನು. ವಾಡಿಕೆಯಂತೆ ಇವನು ಮಲಗುವ ಮನೆಯಲ್ಲಿ ಇಬ್ಬರು ಆಳುಗಳು ಮಲಗಿಕೊಂಡರು. ಅರಸನು ಆದರದಿಂದಲೂ ಅಟ್ಟಹಾಸದಿಂದಲೂ ಉಪಚಾರಗೊಂಡಿದ್ದ ಕಾರಣ ತನ್ನ ಸಾಮಾಜಿಕರಲ್ಲಿಯೂ ಪರಿವಾರದವರಲ್ಲಿಯೂ ಸುಪ್ರೀತನಾಗಿ ತಾನು ಮಲಗುವುದಕ್ಕೆ ಹೋಗುವುದಕ್ಕೆ ಮುಂಚೆ, ಅವರಿಗೆಲ್ಲಾ ಅಪಾರವಾದ ಬಹುಮಾನಗಳನ್ನು ಕೊಟ್ಟನು. ಮನೆಯ ಯಜಮಾನಿಗೆ ಅಮೌಲ್ಯವಾದ ರತ್ನಾಭರಣವನ್ನು ಕೊಟ್ಟು, ಆಕೆಯನ್ನು ಅತ್ಯಂತ ದಯಾಪರಳಾದ ಅತಿಥಿಪೂಜಕಳೆಂದು ಕೊಂಡಾಡಿದನು.

ಆ ವೇಳೆಗೆ ಸಮರಾತ್ರಿಯಾಯಿತು. ಶಬ್ದಮಯವಾದ ಭಗವತ್ಸೃಷ್ಟಿಯಲ್ಲಿ ಅರ್ಧಕ್ಕೆ ಮೇಲ್ಪಟ್ಟ ಭಾಗವು ಮೃತಪ್ರಾಯವಾದಂತೆ ನಿಶ್ಶಬ್ದವಾಯಿತು. ಇದೇ ದುಸ್ಸ್ವಪ್ನಗಳಿಂದ ಮನುಷ್ಯನ ಮನಸ್ಸು ಕಳವಳಗೊಳ್ಳುವ ಕಾಲ. ಇದೇ ತೋಳನಿಗೂ ಕೊಲೆಪಾತಕಿಗೂ ಜಾಗರಣೆಯ ಸಮಯ. ಇದೇ ಕಾಲವೇ ಮ್ಯಾಕ್‌ಬೆತ್‌ನ ಹೆಂಡತಿಯು ನಿದ್ರಾವಶನಾದ ರಾಜನನ್ನು ಕೊಲೆಮಾಡುವುದಕ್ಕಾಗಿ ಅಣಿಮಾಡಿದ ಕಾಲ ಸ್ತ್ರೀಜಾತಿಗೆ ಅತ್ಯಸಹ್ಯಕರವಾದ ಇಂತಹ ಉದ್ಯಮದಲ್ಲಿ ಇವಳು ಪ್ರವೇಶಿಸುತ್ತಿರಲಿಲ್ಲ. ಆದರೆ ತನ್ನ ಗಂಡನು ಕೈಯಾರ ಕೊಲೆಮಾಡಲು ಒಡಂಬಡಲಾರದಂಥ ದಯಾಸ್ವಭಾವದವನಾಗಿದ್ದನು. ಆಶಾಪರವಶನಾಗಿದ್ದರೂ ಅಕಾರ್ಯಕ್ಕೆ ಅಳುಕುವವನಾಗಿದ್ದನು. ಮಹತ್ವಾಕಾಂಕ್ಷೆಯು ಸಾಮಾನ್ಯವಾಗಿ ಘೋರ ಪಾತಕದಲ್ಲಿಯೇ ಪರಿಣಾಮಗೊಳ್ಳುವುದು, ಆದರೆ ಅವನು ಇನ್ನೂ ಇಂಥ ಘೋರ ಕಾರ್ಯಕ್ಕೆ ಸಿದ್ಧನಾಗಿರಲಿಲ್ಲ.

ಅರಸನನ್ನು ಕೊಲ್ಲುವ ವಿಷಯದಲ್ಲಿ ಅವಳು ತನ್ನ ಪತಿಯನ್ನು ಒಪ್ಪಿಸಿದ್ದಳು. ಆದರೂ ಅವನಿಗೆ ಅದರಲ್ಲಿ ಸ್ಥಿರಪ್ರತಿಜ್ಞೆಯುಂಟೋ, ಇಲ್ಲವೋ, ಎಂದು ಅವಳು ಸಂಶಯಪಡುತ್ತಿದ್ದಳು. ತನ್ನ ಪ್ರಕೃತಿಗಿಂತ ಮೃದುತರವಾದ ಪ್ರಕೃತಿಯುಳ್ಳ ತನ್ನ ಪತಿಯ ಸ್ವಭಾವವು ತನ್ನ ಸಂಕಲ್ಪಕ್ಕೆ ಎಲ್ಲಿ ಭಂಗವನ್ನುಂಟುಮಾಡುವುದೋ ಎಂದು ಭಯಪಡುತ್ತಿದ್ದಳು.

ಈ ಕಾರಣದಿಂದ ಅವಳೇ ಭರ್ಜಿಯನ್ನು ತೆಗೆದುಕೊಂಡು ನಿದ್ರೆಮಾಡುತ್ತಿದ್ದ ಅರಸಿನ ಹಾಸಿಗೆಯ ಬಳಿಗೆ ಹೋದಳು. ಅವನ ಕೊಟಡಿಯಲ್ಲಿ ಮಲಗಿದ್ದ ಆಳುಗಳಿಗೆ ಇವಳು ಮೊದಲೇ ಮೈಮರೆಯುವಂತೆ ಮದ್ಯಪಾನ ಮಾಡಿಸಿದ್ದಳು. ರಾಜನು ಪ್ರಯಾಣದ ಆಯಾಸದಿಂದ ಬಳಲಿದ್ದಕಾರಣ ಗಾಢನಿದ್ರೆಯಲ್ಲಿದ್ದನು ಅವನನ್ನು ಲಕ್ಷ್ಯವಿಟ್ಟು ನೋಡಲಾಗಿ, ಅವಳಿಗೆ ನಿದ್ರಾವಶನಾದ ಆ ರಾಜನಲ್ಲಿ ತನ್ನ ತಂದೆಯ ಮುಖಭಾವವು ತೋರಿಬಂತು. ಮುಂದಿನ ಕಾರ್ಯವನ್ನು ನೆರವೇರಿಸಲು ಧೈರ್ಯ ಸಾಲದುದಾಯಿತು.

ಅನಂತರ ತನ್ನ ಪತಿಯೊಡನೆ ಯೋಚಿಸುವುದಕ್ಕಾಗಿ ಹೋದಳು. ಅವನ ಮನಸ್ಸು ಡೋಲಾಯಮಾನವಾಯಿತು. ಅವನು ಈ ಕಾರ್ಯವನ್ನು



ಮ್ಯಾಕ್‌ಬೆತ್‌ನು ಡನ್‌ಕನ್‌ಗೆ ಸುಖನಿದ್ರೆಯಾಗಲೆಂದು ಹೇಳುತ್ತಿರುವ್ರದು.

ಮಾಡುವುದಕ್ಕೆ ಇದ್ದ ಅನೇಕ ಪ್ರಬಲವಾದ ಆಕ್ಷೇಪಣೆಗಳನ್ನು ಎಣಿಸ ತೊಡಗಿದನು. ಮೊದಲನೆಯದಾಗಿ ಆತನು ಅರಸ; ತಾನು ಪ್ರಜೆ. ಅಷ್ಟೇ ಅಲ್ಲದೆ, ತಾನು ಆತನಿಗೆ ಸಮೀಪ ಬಂಧು. ಆ ದಿನ ಆತನು ಅತಿಥಿ; ಅತಿಥಿಯು ಮನೆಗೆ ಬಂದರೆ, ಅವನನ್ನು ದೇವರಂತೆ ಪೂಜಿಸುವುದೂ, ಅವನಿಗೆ ಯಾವ ಅಪಾಯವೂ ಆಗದಂತೆ ನೋಡಿಕೊಳ್ಳುವುದೂ ಗೃಹಸ್ಥ ಧರ್ಮ. ಹೀಗಿರಲು ತಾನೇ ಅವನ ಮೇಲೆ ಕತ್ತಿಯೆತ್ತುವುದು ಅಧರ್ಮ. ಅಲ್ಲದೆ ಡನ್‌ಕನ್ ಪ್ರಭುವು ಅಪಾರ ದಯಾಶಾಲಿ, ಕ್ಷಮಾಶೀಲ, ತನ್ನ ಸಾಮಾಜಿಕರಲ್ಲಿ— ಅದರಲ್ಲಿಯೂ ತನ್ನಲ್ಲಿ—ಅಪಾರವಾದ ಪ್ರೀತಿವಾತ್ಸಲ್ಯಗಳುಳ್ಳವನು. ಇವೇ ಮುಂತಾದ ಆತನ ಗುಣಗಳೂ ಉಪಕಾರಗಳೂ ಜ್ಞಾಪಕಕ್ಕೆ ಬಂದುವು. "ಇಂತಹ ಅರಸರು ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾದವರು. ಅವರು ಕೊಲೆಯಾದರೆ ಪ್ರಜೆಗಳು ಒಂದಕ್ಕೆರಡಾದ ಆಗ್ರಹದಿಂದ ಮೇಲೆ ಬೀಳುವರು. ಅಲ್ಲದೆ ಅವನ ಅಪಾರವಾದ ಕೃಪೆಯಿಂದಲೇ ತಾನು ಸಮಸ್ತ ಪ್ರಜಾಸಮೂಹದಲ್ಲಿಯೂ ಗಣ್ಯತೆಯನ್ನು ಹೊಂದಿರುವುದು! ಇಂತಹ ಖ್ಯಾತಿಯನ್ನು ಒದಗಿಸಿಕೊಟ್ಟವನನ್ನು ಈ ನೀಚಕೊಲೆಯಿಂದ ಕೊನೆಗಾಣಿಸಿ ಕಳಂಕಿತನಾಗುವುದು ಸರ್ವಥಾ ಅನುಚಿತವಾದುದು" ಎಂದು ಮೊದಲಾಗಿ ಯೋಚಿಸಿಕೊಂಡನು.

ಹೀಗೆ ಮ್ಯಾಕ್‌ಬೆತ್‌ನು ತನ್ನ ಅಂತರಂಗದೊಡನೆ ಹೋರಾಡಿ ಕೊಂಡು ಸದಸದ್ವಿವೇಚನೆಮಾಡುತ್ತ ಸನ್ಮಾರ್ಗದ ಕಡೆಗೆ ಮನಸ್ಸು ಕೊಟ್ಟು ಕೊಲೆಯ ಚಿಂತೆಯನ್ನು ಬಿಟ್ಟುಬಿಡಬೇಕೆಂದು ನಿಶ್ಚಯಮಾಡಿಕೊಂಡದ್ದು ಅವನ ಹೆಂಡತಿಗೆ ತಿಳಿಯಿತು. ಅವಳು ತಾನು ಚಿಂತಿಸಿದ್ದ ದುಸ್ಸಂಕಲ್ಪ ವನ್ನು ಸುಲಭವಾಗಿ ಬಿಡುವಂಥವಳಲ್ಲ. ಆದ್ದರಿಂದ ಗಂಡನಿಗೆ ಉಪದೇಶ ಮಾಡುವುದಕ್ಕೆ ಮೊದಲುಮಾಡಿ, ತನ್ನ ಧೈರ್ಯ ದಾರ್ಢ್ಯಗಳನ್ನು ಅವ ನಲ್ಲಿಯೂ ಸ್ವಲ್ಪ ತುಂಬಿ, ಹಿಡಿದ ಕೆಲಸವನ್ನು ಸಾಧಿಸಲೇಬೇಕೆಂಬುದಕ್ಕೆ ಒಂದರ ಮೇಲೆ ಮತ್ತೊಂದರಂತೆ ಕಾರಣಗಳನ್ನು ಕೊಡುತ್ತ ಬಂದಳು. ಈ ಕಾರ್ಯವು ಬಹು ಸುಲಭವೆಂತಲೂ, ಜಾಗ್ರತೆಯಾಗಿ ಮುಗಿದು ಹೋಗುವುದೆಂತಲೂ, ಒಂದು ರಾತ್ರಿ ಸ್ವಲ್ಪ ಹೊತ್ತಿನಲ್ಲಿ ನಡೆಸಿದ

ಕಾರ್ಯವು ಮುಂದೆ ಕಾಲಾನುಕಾಲಕ್ಕೂ ತಮಗೆ ಸಾಮ್ರಾಜ್ಯಪದವಿಯನ್ನೂ ಅಧಿಕಾರವನ್ನೂ ಒದಗಿಸಿಕೊಡುವುದೆಂತಲೂ ಹೇಳತೊಡಗಿದಳು. ಕೈಕೊಂಡ ಕಾರ್ಯವನ್ನು ನೆರವೇರಿಸಲಾರದ ಚಂಚಲ, ಹೇಡಿ ಎಂದು ಅವನನ್ನು ಹಳಿದಳು. "ನಾನು ಮಕ್ಕಳನ್ನು ಹೊತ್ತು ಹೆತ್ತು ಸಾಕಿದ ಹೆಂಗಸು. ಮಗು ಹಾಲು ಕುಡಿಯುತ್ತಿರಲು ಅದನ್ನು ಅಂತಃಕರಣದಿಂದ ಮುದ್ದಿಸಿದವಳು. ಆದರೂ ಈ ಕೊಲೆ ಮಾಡಲು ಪ್ರತಿಜ್ಞೆ ಮಾಡಿರುವಂತೆ, ಆ ಮಗುವಿನ ಕೊಲೆಗೂ ನಾನು ಪ್ರತಿಜ್ಞೆ ಮಾಡಿದ್ದರೆ, ನನ್ನ ಮುಖ ನೋಡಿ ನಗುತ್ತಿರುವ ಹಾಗೆಯೇ ಅದನ್ನು ಎದೆಯಿಂದ ಕಿತ್ತು ತಲೆಯೊಡೆದು ಛಿದ್ರವಾಗುವಂತೆ ಬಡಿದುಬಿಡುತ್ತಿದ್ದೆ. ಇಷ್ಟರ ಮೇಲೆ ಈ ಕೃತ್ಯಕ್ಕೆ ನಾವು ಜವಾಬುದಾರರಾಗಬೇಕಾಗಿಯೂ ಇಲ್ಲ. ಮೈ ಮೇಲೆ ಜ್ಞಾನವಿಲ್ಲದಂತೆ ಕುಡಿದುಬಿದ್ದಿರುವ ಅವನ ಆಳುಗಳ ಮೇಲೆ ಹಾಕಿಬಿಡಬಹುದು" ಎಂದಳು. ಹೀಗೆ ಹಿಂದುಮುಂದು ನೋಡುತ್ತಿದ್ದ ಮ್ಯಾಕ್‌ಬೆತ್‌ನನ್ನು ಅವನ ಹೆಂಡತಿಯು ತನ್ನ ವಾಕ್‌ಪ್ರತಾಪದಿಂದ ಉತ್ತೇಜನಗೊಳಿಸಲು ಅವನು ಮತ್ತೊಮ್ಮೆ ಈ ಭಯಂಕರವಾದ ಕೊಲೆಯನ್ನು ಮಾಡಲು ಧೈರ್ಯ ತಂದುಕೊಂಡನು.

ಅನಂತರ ಅವನು ಆಯುಧಪಾಣಿಯಾಗಿ ಸದ್ದಿಲ್ಲದಂತೆ ಕತ್ತಲೆಯಲ್ಲಿ ರಾಜನು ಮಲಗಿದ್ದ ಕೊಟಡಿಯೊಳಕ್ಕೆ ನುಸುಳಿಹೋದನು. ಹೋಗುತ್ತ ಆಕಾಶದಲ್ಲಿ ತನ್ನ ಕಡೆಗೆ ತಿರುಗಿಕೊಂಡಿದ್ದ ಒಂದು ಭರ್ಜಿಯು ಕಂಡಿತು. ಅದರ ಬಾಯಿಯಿಂದಲೂ ತುದಿಯಿಂದಲೂ ರಕ್ತವು ತೊಟ್ಟಿಕ್ಕುತ್ತಿತ್ತು. ಆ ಭರ್ಜಿಯನ್ನು ಹಿಡಿದುಕೊಳ್ಳುವುದಕ್ಕಾಗಿ ಅವನು ಕೈನೀಡಲು, ಅಲ್ಲಿ ಏನೂ ಇರಲಿಲ್ಲ. ಅದು ಬರಿಯ ಚಿತ್ತಭ್ರಮಣೆ. ಕ್ರೂರಕಾರ್ಯವನ್ನು ಕೈಕೊಂಡು ಕಳವಳಹೊಂದಿದ ಅವನ ಮನಸ್ಸಿನ ಪರಿಣಾಮ. ಅಷ್ಟೇಯೆ.

ಮ್ಯಾಕ್‌ಬೆತ್‌ನು ಈ ಕಳವಳದಿಂದ ಹೇಗೋ ಮುಕ್ತನಾಗಿ, ನಿದ್ರೆಯಲ್ಲಿದ್ದ ಅರಸನನ್ನು ತನ್ನ ಆಯುಧದ ಒಂದೇ ಇರಿತದಿಂದ ಕೊಂದುಬಿಟ್ಟನು. ಈ ಕೊಲೆಯಾದ ಕೂಡಲೇ, ಅಲ್ಲಿ ಮಲಗಿದ್ದ ಆಳುಗಳಲ್ಲಿ ಒಬ್ಬನು ನಿದ್ರೆಮಾಡುತ್ತಲೇ ನಕ್ಕನು. ಮತ್ತೊಬ್ಬನು "ಕೊಲೆ!" ಎಂದು ಕೂಗಿ

ದನು. ಈ ಶಬ್ದದಿಂದ ಇಬ್ಬರೂ ಎಚ್ಚೆತ್ತರು. ಒಬ್ಬನು "ಭಗವಂತ, ಕಾಪಾಡು!" ಎಂದು ಸೂಕ್ಷ್ಮವಾಗಿ ಪ್ರಾರ್ಥಿಸಿದನು. ಮತ್ತೊಬ್ಬನು "ತಥಾಸ್ತು" ಎಂದನು. ಆದರೆ ಯಾರೂ ಏಳಲಿಲ್ಲ. ಮತ್ತೆ ನಿದ್ರೆ ಹೋಗಿಬಿಟ್ಟರು. ಇವರು ಮಾತನಾಡಿಕೊಳ್ಳುತ್ತಿರುವಾಗ್ಗೆ ಮ್ಯಾಕ್‌ಬೆತ್‌ನೂ ಅಲ್ಲಿಯೇ ನಿಂತಿದ್ದನು. ಒಬ್ಬನು ದೇವರನ್ನು ಪ್ರಾರ್ಥಿಸಿದ ಮೇಲೆ ಮತ್ತೊಬ್ಬನು "ತಥಾಸ್ತು" ಎಂದು ಹೇಳಿದನಷ್ಟೆ, ಈ ಸಂದರ್ಭದಲ್ಲಿ ತನಗೂ ಭಗವದನುಗ್ರಹವು ಅತ್ಯಾವಶ್ಯಕವಾಗಿದ್ದುದರಿಂದ ಮ್ಯಾಕ್‌ಬೆತ್‌ನೂ "ತಥಾಸ್ತು' ಎಂದು ಹೇಳಲು ಪ್ರಯತ್ನಿಸಿದನು. ಆದರೆ ಆ ಮಾತು ಗಂಟಲಿನಲ್ಲಿಯೇ ಸಿಕ್ಕಿಕೊಂಡಿತು. ಉಸಿರು ಹೊರಡಲಿಲ್ಲ. ಆಗ "ಇನ್ನು ನಿದ್ರೆಯಿಲ್ಲ. ನಿರಪರಾಧಿನಿಯೂ ಪ್ರಾಣಪೋಷಿಣಿಯೂ ಆದ ನಿದ್ರಾದೇವಿಯನ್ನು ಮ್ಯಾಕ್‌ಬೆತ್‌ನು ಕೊಲೆಮಾಡಿದನು. ಗ್ಲಾಮಿಸ್‌ನು ನಿದ್ರೆಯನ್ನು ಕೊಲೆಮಾಡಿಬಿಟ್ಟನು. ಆದುದರಿಂದ ಕಾಡರ್‌ನು ಇನ್ನು ನಿದ್ರಿಸುವ ಹಾಗಿಲ್ಲ. ಮ್ಯಾಕ್‌ಬೆತ್‌ನು ನಿದ್ರಿಸುವ ಹಾಗಿಲ್ಲ" ಎಂದು ಯಾರೋ ಕೂಗಿ ಕೂಗಿ ಹೇಳಿದಂತಾಯಿತು.

ಇಂತಹ ಭಯಂಕರವಾದ ಭಾವನೆಗಳಲ್ಲಿ ತೊಳಲುತ್ತ ಮ್ಯಾಕ್‌ಬೆತ್‌ನು ತನ್ನ ಮಡದಿಯ ಬಳಿಗೆ ಹೋದನು. ಅವಳು ಅವನ ಭಯಭ್ರಾಂತ ಸ್ಥಿತಿಯನ್ನು ಕಂಡು, ಹಿಡಿದ ಕೆಲಸ ಹೇಗೋ ಕೆಟ್ಟುಹೋಗಿರಬೇಕೆಂದು ನೆನೆದಳು. ನಿಜಸ್ಥಿತಿ ತಿಳಿದ ಮೇಲೆ ರಕ್ತಕಲೆಯನ್ನು ತೊಳೆದುಕೊಂಡು ಬರುವಂತೆ ಗಂಡನನ್ನು ಕಳುಹಿಸಿ, ಈ ಅಪರಾಧವು ಆಳುಗಳ ಮೇಲೆ ಹೊರುವಂತೆ ಅವರ ಕಪೋಲಗಳನ್ನು ರಕ್ತಮಯವಾಗಿ ಮಾಡಲು ಭರ್ಜಿಯನ್ನು ತೆಗೆದುಕೊಂಡು ಆ ಕೊಟಡಿಗೆ ಹೋದಳು.

ಸೂರ್ಯೋದಯವಾಯಿತು. ಒಡನೆಯೇ ಕೊಲೆಯೂ ಗೊತ್ತಾಗಿ ಹೋಯಿತು. ಕೊಲೆಯನ್ನು ಗುಟ್ಟುಮಾಡಿಟ್ಟುಕೊಳ್ಳುವುದಕ್ಕಾಗುತ್ತದೆಯೆ? ಮ್ಯಾಕ್‌ಬೆತ್‌ನೂ, ಅವನ ಹೆಂಡತಿಯೂ, ಅಪರಿಮಿತವಾದ ವ್ಯಥೆಯನ್ನು ಅನುಭವಿಸುವಂತೆ ನಟನೆ ಮಾಡಿದರು. ಭರ್ಜಿಯೂ ಕಪೋಲಗಳ ಮೇಲಿನ ರಕ್ತಕಲೆಯೂ ಆಳುಗಳೇ ಕೊಲೆಪಾತಕಿಗಳೆಂದು ಹೇಳುವುದಕ್ಕೆ ಪ್ರಬಲ

ಸಾಧನಗಳಾಗಿದ್ದುವು. ಆದರೂ ಅನುಮಾನವೆಲ್ಲಾ ಮ್ಯಾಕ್‌ಬೆತ್‌ನ ಮೇಲೇ ಬಂದು ಬಿದ್ದಿತು. ಏಕೆಂದರೆ ಇಂಥ ಘೋರಕೃತ್ಯವೆನ್ನೆಸಗುವುದಕ್ಕೆ ಅವನಿಗಿದ್ದ ಫಲಾಭಿಸಂಧಿಗಳು ಆ ನಿರ್ಭಾಗ್ಯ ಸೇವಕರಿಗೆ ಇರಲಿಲ್ಲವೆಂಬುದು ಸ್ಪಷ್ಟವಾಗಿತ್ತು. ಆದ್ದರಿಂದ ಡನ್‌ಕನ್‌ನ ಇಬ್ಬರು ಮಕ್ಕಳೂ ಓಡಿಹೋದರು. ಹಿರಿಯವನಾದ ಮ್ಯಾಲ್ಕೋಂಸು ಇಂಗ್ಲೆಂಡಿನ ಆಸ್ಥಾನದಲ್ಲಿ ಆಶ್ರಯ ಹೊಂದಿದನು. ಕಿರಿಯವನಾದ ಡೋನಾಲ್‌ಬೇನನು ಐರ್ಲೆಂಡಿಗೆ ಹೋಗಿ ತಲೆಮರಸಿಕೊಂಡನು.

ಡನ್‌ಕನ್ನಿನ ಅನಂತರ ಪಟ್ಟಾಭಿಷಿಕ್ತರಾಗಬೇಕಾಗಿದ್ದ ಅವನ ಮಕ್ಕಳು ಈ ರೀತಿಯಲ್ಲಿ ತಲೆತಪ್ಪಿಸಿಕೊಂಡು ಹೋದಕಾರಣ ಅರಸಿನ ಸಮೀಪಬಂಧುವಾದ ಮ್ಯಾಕ್‌ಬೆತ್‌ನು ಸಿಂಹಾಸನಕ್ಕೆ ಬಂದನು. ಹೀಗೆ ಆ ಮಂತ್ರವಾದಿನಿಯರ ಭವಿಷ್ಯವು ಅಕ್ಷರಶಃ ನಿಜವಾಗಿ ಪರಿಣಮಿಸಿತು.

ಮ್ಯಾಕ್‌ಬೆತ್‌ನೂ ಅವನ ಹೆಂಡತಿಯೂ ಹೀಗೆ ಉನ್ನತಪದವಿಯನ್ನು ಪಡೆದಾಗ್ಯೂ ಆ ಮಂತ್ರವಾದಿನಿಯರ ಮಾತಿನಂತೆ ತಮ್ಮ ಅನಂತರ ಬ್ಯಾಂಕೋವಿನ ಮಕ್ಕಳು ಅರಸರಾಗುವರೇ ವಿನಾ ತಮ್ಮ ಮಕ್ಕಳು ಅರಸರಾಗುವುದಿಲ್ಲವೆಂಬುದನ್ನು ಮರೆಯಲಾರದೆ, ಮನದಲ್ಲಿಯೇ ಕುದಿಯುತ್ತಿದ್ದರು. ಇಂತಹ ಮಹಾ ಕ್ರೂರವಾದ ಕೆಲಸವನ್ನು ಮಾಡಿ, ತಮ್ಮ ಕೈಗಳನ್ನು ರಕ್ತಮಾಡಿಕೊಂಡುದು ಇನ್ನೊಬ್ಬನ ಶ್ರೇಯಸ್ಸಾಧನೆಗೆ ಕಾರಣವಾಯಿತಲ್ಲಾ, ಅವನ ಮಕ್ಕಳಿಗೆ ಸಿಂಹಾಸನ ದೊರೆಯುವಂತಾಯಿತಲ್ಲಾ, ಎಂದು ಹೊಟ್ಟೆ ಕಿವಿಚಿಕೊಂಡರು. ಮತ್ತು ಆ ಮಂತ್ರಗಾತಿಯರ ಮಾತು ತಮ್ಮ ವಿಚಾರದಲ್ಲಿ ಅಕ್ಷರಶಃ ನಿಜವಾಗಿ ಪರಿಣಮಿಸಿದ್ದರೂ, ಅವರ ಭವಿಷ್ಯೋಕ್ತಿಯಲ್ಲಿ ಮಿಕ್ಕ ಭಾಗವನ್ನು ಸುಳ್ಳುಮಾಡುವೆವೆಂಬ ಭ್ರಾಂತಿಯಿಂದ ಬ್ಯಾಂಕೋವನ್ನೂ ಅವನ ಮಕ್ಕಳನ್ನೂ ಕೊಂದುಬಿಡಬೇಕೆಂದು ನಿಶ್ಚಯಿಸಿದರು.

ಈ ಉದ್ದೇಶವನ್ನು ನೆರವೇರಿಸಿಕೊಳ್ಳಲು ಅವರು ಆಸ್ಥಾನದ ಸಮಸ್ತ ಶ್ರೀಮಂತರನ್ನೂ ಔತಣಕ್ಕೆಂದು ಕರೆಸಿದರು. ಅವರಲ್ಲಿ ಬ್ಯಾಂಕೋ ಮತ್ತು ಅವನ ಮಗ ಫ್ಲಿಯಾನ್ಸ್‌ರನ್ನು ಅತ್ಯಾದರ ಗೌರವಗಳಿಂದ ಕರೆದಿದ್ದರು.

ಅವರು ಆ ರಾತ್ರಿ ಅರಮನೆಗೆ ಬರುವ ಹಾದಿಯಲ್ಲಿ ಮ್ಯಾಕ್‌ಬೆತ್‌ನು ಕೊಲೆಗಾರರನ್ನು ನಿಲ್ಲಿಸಿದ್ದನು. ಅವರು ಬ್ಯಾಂಕೋವನ್ನು ಕಂಡಕೂಡಲೆ ಇರಿದು ಕೊಂದರು. ಫ್ಲಿಯಾನ್‌ಸನು ಏಟು ಬೀಳುವಷ್ಟರಲ್ಲಿ ತಪ್ಪಿಸಿಕೊಂಡು ಓಡಿಹೋದನು. (ಮುಂದೆ ಇವನ ಸಂತತಿಯವರು ಸ್ಕಾಟ್ಲೆಂಡ್ ಸಿಂಹಾಸನವನ್ನೇರಿದರು. ಅವರಲ್ಲಿ ಒಬ್ಬನಾದ ಆರನೆಯ ಜೇಮ್ಸ್‌ನು ಇಂಗ್ಲೆಂಡಿಗೆ ಒಂದನೆಯ ಜೇಮ್ಸ್ ಎಂಬ ಹೆಸರಿನಲ್ಲಿ ಅರಸನಾದನು. ಇವನ ಆಳಿಕೆಯಲ್ಲಿ ಈ ಎರಡು ರಾಜ್ಯಗಳೂ ಒಂದಾದುವು.)

ಭೋಜನದ ವೇಳೆಯಲ್ಲಿ ರಾಣಿ-ಮ್ಯಾಕ್‌ಬೆತ್‌ಳ ರೀತಿಯು ಬಹು ಗಂಭೀರವಾಗಿಯೂ, ರಾಜಠೀವಿಯುಳ್ಳದಾಗಿಯೂ ಇತ್ತು. ಅವಳು ಅತಿಥಿ ಸತ್ಕಾರನಿರತೆಯೂ ದಯಾಪರೆಯೂ ಆದ ಗೃಹಿಣಿಯಂತೆಯೇ ತೋರುತ್ತಿದ್ದಳು.

ಮ್ಯಾಕ್‌ಬೆತ್‌ನು ತನ್ನ ಅತಿಥಿಗಳೊಡನೆ ಸರಸವಾಗಿಯೂ, ಆದರ ಪುರಸ್ಸರವಾಗಿಯೂ ಮಾತನಾಡುತ್ತ, "ಈ ನಮ್ಮ ಸ್ಕಾಟ್ಲೆಂಡಿನಲ್ಲಿರುವ ಶ್ರೇಷ್ಠ ಶ್ರೀಮಂತರೆಲ್ಲರೂ ಈಗ ನನ್ನ ಮನೆಯನ್ನಲಂಕರಿಸಿರುವರು. ಆದರೆ ನನ್ನ ಗೆಳೆಯನಾದ ಬ್ಯಾಂಕೋವೂ ಅವನ ಮಗನೂ ಇಲ್ಲಿಲ್ಲದಿರುವುದು ಒಂದು ದೊಡ್ಡ ಕೊರತೆಯಾಗಿದೆ. ಅವರು ನಮ್ಮ ಮನ್ನಣೆಯನ್ನು ಪರಿಗ್ರಹಿಸಲಿಲ್ಲವೇಕೆಂದು ಚಿಂತಿಸುತ್ತಿದ್ದೇನೆ. ಅವರು ಏನೋ ಅನಿವಾರ್ಯದಿಂದ ಬಾರದಿರಬಹುದು; ಅಂತು ಅವರು ಸುಖವಾಗಿದ್ದರೆ ಸಂತೋಷ' ಎಂದನು.

ಮ್ಯಾಕ್‌ಬೆತ್‌ನು ಈ ಮಾತುಗಳನ್ನು ಆಡುತ್ತಿರುವ ವೇಳೆಗೆ ಇವನ ಏರ್ಪಾಟಿನಂತೆ ಬ್ಯಾಂಕೋವು ಕೊಲೆಗೆ ಈಡಾಗಿದ್ದನು. ಅವನ ಪ್ರೇತವು ಆ ಭೋಜನಶಾಲೆಗೆ ಪ್ರವೇಶಿಸಿ, ಮ್ಯಾಕ್‌ಬೆತ್‌ನು ಕುಳಿತುಕೊಳ್ಳಬೇಕೆಂದಿದ್ದ ಪೀಠದ ಮೇಲೆ ಕುಳಿತುಕೊಂಡಿತು. ಮ್ಯಾಕ್‌ಬೆತ್‌ನು ಬಹಳ ಧೈರ್ಯಶಾಲಿ; ಎಂತಹ ಭೂತ ಭೇತಾಳಗಳನ್ನಾದರೂ ಸ್ವಲ್ಪವೂ ಭೀತನಾಗದೆ ಎದುರುಗೊಂಡು ಮಾತನಾಡುವವನು. ಆದರೂ ಈ ಭಯಂಕರವಾದ ನೋಟದಿಂದ ಅವನ ಮುಖವು ಕಳೆಗುಂದಿತು. ಕೆನ್ನೆಗಳು ಬಿಳುಪೇರಿದುವು.

ತುಟಿಗಳು ನಡುಗಿದುವು. ಶರೀರವು ರೋಮಾಂಚಿತವಾಯಿತು. ಅವನು ಸ್ತಂಭೀಭೂತನಾಗಿ ಆ ಭೂತವನ್ನು ಬಿರುಗಣ್ಣಿಂದ ನೋಡುತ್ತ ನಿಂತನು.

ಇವನ ರಾಣಿಯೂ ಅತಿಥಿಗಳೂ ಇವನು ಬರಿಯ ಪೀಠವನ್ನು ನೆಡುಗಣ್ಣಿಂದ ನೋಡುತ್ತ ನಿಂತಿರುವುದನ್ನು ಕಂಡರು. ಅವರಿಗೆ ಏನೂ ತಿಳಿಯಲಿಲ್ಲ. ಆದುದರಿಂದ ಅವರು ಇದನ್ನು ಒಂದು ಬಗೆಯ ಮಾನಸಿಕ ವ್ಯಾಧಿಯೆಂದು ತಿಳಿದರು. ಆದರೆ ರಾಣಿಯು "ಡನ್‌ಕನ್‌ನನ್ನು ಕೊಲೆ ಮಾಡಲು ಹೋದಾಗ ಆಕಾಶದಲ್ಲಿ ನಿನ್ನ ಕಡೆಗೆ ತಿರುಗಿದ್ದ ಆಯುಧವನ್ನು ನೋಡಿದಂತೆಯೇ, ಇದೂ ಒಂದು ಬಗೆಯ ಭ್ರಮೆ. ಭ್ರಮೆಯನ್ನು ಬಿಡು !" ಎಂದು ರಾಜನಿಗೆ ಕಿವಿಯಲ್ಲಿ ಹೇಳಿದಳು. ಆದರೂ ಮ್ಯಾಕ್‌ಬೆತ್‌ನು ಭೂತವನ್ನು ನೋಡುತ್ತ ಅದರೊಡನೆ ಏನೇನೋ ಮಾತನಾಡುತ್ತ ನಿಂತಿದ್ದನು. ಮಿಕ್ಕವರು ಆಡುವ ಮಾತುಗಳು ಅವನಿಗೆ ಕೇಳಿಬರುತ್ತಲೇ ಇರಲಿಲ್ಲ. ಅವನ ಮಾತುಗಳು ಅಸ್ಫುಟವಾಗಿದ್ದುವು. ಆದರೂ ಭಯಂಕರ ವಾದ ತಮ್ಮ ಅಂತರಂಗವು ಬಹಿರಂಗವಾದೀತೆಂದು ರಾಣಿಯು ಭಯಪಡುವ ಮಟ್ಟಿಗೆ ಸ್ಪಷ್ಟವಾಗಿದ್ದುವು. ಆದರಿಂದ ಆಕೆಯು, "ಮಹನೀಯರಾದ ಅತಿಥಿಗಳಿರಾ, ಆಗಾಗ್ಗೆ ರಾಜನು ಈ ವಿಧವಾದ ಬುದ್ಧಿಭ್ರಮಣೆಗೆ ಗುರಿ ಯಾಗುತ್ತಿರುವನು. ಆದುದರಿಂದ ಇಂದಿಗೆ ತಾವೆಲ್ಲರೂ ವ್ಯವಧಾನ ತೆಗೆದು ಕೊಳ್ಳಬಹುದು" ಎಂದು ನೆಪವನ್ನು ಕಲ್ಪಿಸಿ ಹೇಳಿ, ತನ್ನ ಅತಿಥಿಗಳನ್ನು ಸಾಗಕಳುಹಿಸಿದಳು.

ಇಲ್ಲಿಂದ ಮುಂದಕ್ಕೆ ಮ್ಯಾಕ್‌ಬೆತ್‌ನು ಈ ವಿಧವಾದ ಭಯಂಕರ ಮನೋವೃತ್ತಿಯುಳ್ಳವನಾದನು. ಅವನ ಮತ್ತು ಅವನ ರಾಣಿಯ ನಿದ್ರೆಯು ಭಯಂಕರವಾದ ಕನಸುಗಳಿಂದ ಉಪಹತಿಗೊಳ್ಳುತ್ತಿತ್ತು. ಬ್ಯಾಂಕೋವಿನ ಮರಣವಿಚಾರವೇನೂ ಇವರನ್ನು ವಿಶೇಷವಾಗಿ ತೊಂದರೆಗೊಳಿಸಲಿಲ್ಲ ಆದರೆ ಪಲಾಯನ ಮಾಡಿದ ಫ್ಲಿಯಾನ್ಸನ ವಿಚಾರವು ಇವರ ವ್ಯಥೆಗೆ ಕಾರಣವಾಗಿದ್ದಿತು. ಏಕೆಂದರೆ, ಆ ಮಂತ್ರಗಾತಿಯರಾದ ಸಹೋದರಿಯರ ಭವಿಷ್ಯದಂತೆ ಅವನ ಸಂತತಿಯವರು ಮುಂದೆ ಸ್ಕಾಟ್ಲೆಂಡಿನ ದೊರೆಗಳಾಗು ವರಲ್ಲವೆ! ಇಂತಹ ಅಸಹ್ಯ ವೇದನೆಗಳಿಗೆ ಒಳಗಾದ ಇವರಿಗೆ ಮನ

ಶ್ಯಾಂತಿಯು ದೂರವಾಯಿತು. ಆದ್ದರಿಂದ ಮ್ಯಾಕ್‌ಬೆತ್‌ನು ಆ ಮಂತ್ರ ಗಾತಿಯರನ್ನು ಹುಡುಕಬೇಕೆಂದೂ ತನಗುಂಟಾಗುವ ಉತ್ತರೋತ್ತರ ಹಾನಿಯನ್ನು ಅವರಿಂದ ತಿಳಿಯಬೇಕೆಂದೂ ಯೋಚಿಸಿಕೊಂಡನು.

ಇವನು ಅವರನ್ನು ಹಿಂದೆ ನೋಡಿದ್ದ ಕಾಡಿನಲ್ಲಿಯೇ ಒಂದು ಗವಿಯಲ್ಲಿ ಕಂಡನು. ಕಾಲಜ್ಞಾನಮಹಿಮೆಯಿಂದ ಇವನ ಬರುವಿಕೆಯನ್ನು ಅವರು ತಿಳಿದು, ಭವಿಷ್ಯ ಸಂಘಟನೆಯನ್ನು ತಮಗೆ ತಿಳಿಸುವಂತಹ ನಾರಕ ಪಿಶಾಚಗಳನ್ನು ಆಮಂತ್ರಿಸುವುದಕ್ಕಾಗಿ ಭಯಂಕರವಾದ ಕ್ರಿಯಾಕಲಾಪಕ್ಕೆ ಅಣಿಮಾಡುತ್ತಿದ್ದರು. ಕಪ್ಪೆ, ಕಪಟ, ಹಾವು, ಹಲ್ಲಿಯ ಕಣ್ಣು, ನಾಯಿಯ ನಾಲಿಗೆ, ಹೆಂಟೇಗೊದ್ದನ ಕಾಲು, ಗೂಗೆಯ ರೆಕ್ಕೆ, ಘಟಸರ್ಪದ ಪೊರೆ, ತೋಳನ ಹಲ್ಲು, ತಿಮಿಂಗಿಲದ ಕಿಬ್ಬೊಟ್ಟೆ, ಮಾಟಗಾತಿಯ ಶವ, ವಿಷದ್ರವ್ಯವಾದ ಹೆಂಲಾಕ್ ಬೇರು, ಆಡಿನ ಪಿತ್ತರಸ, ಯೆಹೂದಿಯ ಯಕೃತ್ತು, ಸಮಾಧಿಯೊಳಕ್ಕೆ ಬೇರುಬಿಟ್ಟುಕೊಂಡ ಯೂ ಮರದ ಚೆಕ್ಕೆ, ಸತ್ತ ಮಗುವಿನ ಕೈಬೆರಳು ಮೊದಲಾದ ಪದಾರ್ಥಗಳನ್ನು ಒಂದು ದೊಡ್ಡ ಗುಡಾಣದಲ್ಲಿ ಹಾಕಿ ಕುದಿಸಿದರು. ಕಾವು ಹೆಚ್ಚಾದಾಗ ಕಾಡುಕೋತಿಯ ರಕ್ತ, ತನ್ನ ಮರಿಗಳನ್ನು ತಾನೇ ತಿಂದ ಹಂದಿಯ ರಕ್ತಗಳನ್ನು ಬೆರೆಸಿದರು. ಈ ಕಲಾಪದಿಂದ ನರಕಲೋಕದ ಪಿಶಾಚಿಗಳು ಇವರ ಸ್ವಾಧೀನವಾಗಿ ಇವರ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳುತ್ತಿದ್ದುವು. ಈಗ ಅವರು ಮ್ಯಾಕ್‌ಬೆತ್‌ನನ್ನು ಕುರಿತು "ನಿನಗೆ ಉಂಟಾಗಿರುವ ಸಂದೇಹಗಳನ್ನು ನಾವು ಪರಿಹರಿಸೋಣವೇ ಅಥವಾ ನಮ್ಮ ಒಡೆಯರಾದ ಭೂತಗಳು ಪರಿಹರಿಸೋಣವೋ?" ಎಂದರು. ಮ್ಯಾಕ್‌ಬೆತ್‌ನು ಸ್ವಲ್ಪವೂ ಹೆದರದೆ "ಅವರೆಲ್ಲಿರುವರು? ಅವರನ್ನು ನನಗೆ ತೋರಿಸಿ" ಎಂದನು ಅವರು ಆ ಭೂತಗಳನ್ನು ಕೂಗಿದರು. ಮೊದಲನೆಯ ಭೂತವು ರಣ ಗುಲಾವಿಯನ್ನು ಧರಿಸಿದ ಯೋಧನ ತಲೆಯಂತೆ ಗುಡಾಣದಿಂದ ಮೇಲಕ್ಕೆದ್ದು, "ಮ್ಯಾಕ್‌ಬೆತ್, ಫೈಫ್‌ನ ನಾಯಕನ ವಿಚಾರದಲ್ಲಿ ಜಾಗರೂಕನಾಗಿರು!" ಎಂದು ಹೇಳಿತು. ಈರೀತಿಯಾದ ಮುಂಜಾಗ್ರತೆಯನ್ನು ಹೇಳಿದುದಕ್ಕಾಗಿ, ಮ್ಯಾಕ್‌ಬೆತ್‌ನು ಆ ಭೂತಕ್ಕೆ ತನ್ನ ಕೃತಜ್ಞತೆಯನ್ನು ತಿಳಿಸಿದನು. ಮ್ಯಾಕ್‌ಡಫ್ ಎಂಬ

ಹೆಸರಿನ ಫೈಫ್‌ನ ನಾಯಕನು ತನಗೆ ಅಹಿತನೆಂದು ಮ್ಯಾಕ್‌ಬೆತ್‌ನಿಗೆ ಸಂಶಯವಿದ್ದ ಕಾರಣ ಅವನಲ್ಲಿ ಇವನಿಗೆ ಮೊದಲೇ ಕ್ರೋಧವಿತ್ತು.

ಎರಡನೆಯ ಭೂತವು ರಕ್ತಮಯವಾದ ಮಗುವಿನಂತೆ ಗೋಚರಿಸಿ, "ಮ್ಯಾಕ್‌ಬೆತ್, ಭಯಪಡಬೇಡ. ಮನುಷ್ಯ ಶಕ್ತಿಯನ್ನು ಅಲ್ಲಗಳೆದು ನಗುವವನಾಗು. ಹೆಂಗಸಿನ ಹೊಟ್ಟೆಯಲ್ಲಿ ಹುಟ್ಟಿ ಬಂದವನು ಯಾವನೂ ನಿನ್ನನ್ನು ತೊಂದರೆಪಡಿಸಲಾರನು. ಧೈರ್ಯಶಾಲಿಯಾಗಿರು. ಸ್ಥಿರಪ್ರತಿಜ್ಞನಾಗಿರು!' ಎಂದು ಹೇಳಿತು. ಈ ಮಾತನ್ನು ಕೇಳಿದುದರಿಂದ ಮ್ಯಾಕ್‌ಬೆತ್‌ನು, "ಮ್ಯಾಕ್‌ಡಫ್‌ನೇ, ಹಾಗಾದರೆ ಒದುಕು; ನಿನ್ನಿಂದ ನನಗೆ ಭಯವೇನೂ ಇಲ್ಲ. ಆದರೂ, ನಾನು ಈ ಭರವಸೆಯನ್ನು ಸ್ಥಿರಮಾಡಿಕೊಳ್ಳಬೇಕು. ಕೂಡದು! ಕೂಡದು! ನೀನು ಒದುಕಿರಕೂಡದು. ನಿನ್ನ ಭಯವು ಸ್ವಪ್ನದಲ್ಲಿಯೂ ಇರಕೂಡದು. ಸಿಡಿಲು ಎರಗುವಂತಿದ್ದರೂ ನಾನು ನಿಶ್ಚಿಂತನಾಗಿ ನಿದ್ರಿಸುವಂತಾಗಬೇಕು" ಎಂದುಕೊಂಡನು.

ಮೂರನೆಯ ಭೂತವು ಕೈಯಲ್ಲಿ ಒಂದು ಮರದಕೊಂಬೆ ಸಹಿತವಾಗಿ ಕಿರೀಟವುಳ್ಳ ಮಗುವಿನಂತೆ ಗುಡಾಣದಿಂದ ಮೇಲಕ್ಕೆ ಎದ್ದು 'ಮ್ಯಾಕ್‌ಬೆತ್, ಧೈರ್ಯಶಾಲಿಯಾಗಿರು. ಯಾರು ಅಸಮಾಧಾನಪಡುವರು, ಯಾರು ಪಿತೂರಿ ನಡೆಸುವರು, ಯಾರು ದ್ರೋಹಚಿಂತೆಯನ್ನು ಮಾಡುತ್ತಿರುವರು, ಎಂಬಿವುಗಳಿಗೆ ಮನಗೊಡಬೇಡ. ಡೆನ್‌ಸಿನೇನ್ ಬೆಟ್ಟಕ್ಕೆ ಒರ್ನಂಕಾಡು ದಂಡೆತ್ತಿ ಬರುವವರೆಗೆ ನಿನಗೆ ಪರಾಜಯವಿಲ್ಲ" ಎಂದು ಹೇಳಿ ಅಂತರ್ಧಾನವಾಯಿತು.

ಮ್ಯಾಕ್‌ಬೆತ್‌ನು "ಇದೇನೋ ಶುಭಸೂಚನೆಯೇ! ಏಕೆಂದರೆ, ಆ ಕಾಡನ್ನು ಜರುಗಿಸುವವರು ಯಾರು? ಭೂಮಿಯಲ್ಲಿ ಬೇರುಸಹಿತವಾದ ವೃಕ್ಷಸಮೂಹವನ್ನು ಜರುಗಿಸುವವರು ಯಾರು? ಮನುಷ್ಯನಿಗೆ ವಿಧಿವಿಹಿತವಾದ ಆಯುಷ್ಯವು ಇರುವಷ್ಟು ಕಾಲ ನಾನೂ ಬದುಕಿರುವೆನು; ಹಗೆಗಳ ಕೈಯಿಂದ ಗತಪ್ರಾಣನಾಗಿ ಅಕಾಲಮರಣ ಹೊಂದುವುದಿಲ್ಲ ಎಂದಾಯಿತು. ಆದರೂ ನನ್ನ ಹೃದಯವು ಒಂದು ವಿಚಾರವನ್ನು ತಿಳಿಯಲು ಬಹಳ ಕುತೂಹಲಪಡುತ್ತಿರುವುದು. ಬ್ಯಾಂಕೋವಿನ ಸಂತತಿಯವರು ಈ ರಾಜ್ಯ

ವನ್ನು ಆಳುವರೇ? ಇದನ್ನು ನಿಮ್ಮ ವಿದ್ಯೆಯಿಂದ ಅರಿಯಬಲ್ಲಿರಾದರೆ ಹೇಳಿ" ಎಂದನು. ಒಡನೆಯೇ ಆ ಪಾತ್ರೆಯು ಭೂಮಿಯೊಳಕ್ಕೆ ಕುಸಿದು ಹೋಯಿತು. ಸಂಗೀತ ಧ್ವನಿಯು ಕೇಳಿಬಂತು. ಅರಸುಗಳಂತೆ ತೋರುವ ಎಂಟು ಛಾಯೆಗಳು ಮ್ಯಾಕ್‌ಬೆತ್‌ನ ಮುಂದೆ ಹಾದುಹೋದುವು. ಕೊನೆಯಲ್ಲಿ ಬ್ಯಾಂಕೋವು ಕೈಯಲ್ಲಿ ಕನ್ನಡಿಯನ್ನು ಹಿಡಿದುಕೊಂಡು, ತನ್ನ ಮುಂದೆ ಬಂದಂತೆ ಆಯಿತು. ಆ ಕನ್ನಡಿಯಲ್ಲಿ ಇನ್ನೂ ಅನೇಕ ರೂಪಗಳು ಕಾಣಬಂದುವು. ಬ್ಯಾಂಕೋವು ಪೂರ್ತಿಯಾಗಿ ರಕ್ತಾಚ್ಛಾದಿತನಾಗಿ ಮ್ಯಾಕ್‌ಬೆತ್‌ನನ್ನು ನೋಡಿ ನಗುತ್ತಾ, ಆ ರೂಪಗಳನ್ನು ತೋರಿಸುತ್ತಿರುವಂತೆ ಕಂಡುಬಂದಿತು. ಇವರೇ ತನ್ನ ಅನಂತರ ಸ್ಕಾಟ್ಲೆಂಡನ್ನು ಆಳುವವರೆಂದು ಮ್ಯಾಕ್‌ಬೆತ್‌ನು ಇದರಿಂದ ತಿಳಿದನು.

ಅನಂತರ ಆ ಮಾಟಗಾತಿಯರು ಅರಸಿಗೆ ಮರ್ಯಾದೆ ಮಾಡುವುದಕ್ಕಾಗಿಯೋ ಎಂಬಂತೆ ಮೃದುವಾಗಿ ಹಾಡುತ್ತಾ ಕುಣಿಯುತ್ತಾ ಅಂತರ್ಧಾನವಾದರು. ಇಲ್ಲಿಂದ ಮುಂದೆ ಮ್ಯಾಕ್‌ಬೆತ್‌ನ ಆಲೋಚನೆಗಳು ಇನ್ನೂ ಭಯಂಕರವಾದುವು. ಅವನು ರಕ್ತದಾಹವುಳ್ಳವನಾದನು. ರಾಜಧಾನಿಗೆ ಹಿಂದಿರುಗುತ್ತಿದ್ದ ಹಾಗೆಯೇ, ಫೈಫ್‌ನ ನಾಯಕನಾದ ಮ್ಯಾಕ್‌ಡಫ್‌ನು ಇಂಗ್ಲೆಂಡಿಗೆ ಓಡಿಹೋದನೆಂದೂ, ತನ್ನನ್ನು ತಳ್ಳಿ ಮ್ಯಾಲ್ಕೋಂನನ್ನು ಸಿಂಹಾಸನದಲ್ಲಿ ಕುಳ್ಳಿರಿಸಲು ಅನುವಾಗುತ್ತಿದ್ದ ಸೇನೆಯೊಡನೆ ಸೇರಿಕೊಂಡಿದ್ದನೆಂದೂ, ವರ್ತಮಾನ ಬಂತು. ಇದರಿಂದ ಮ್ಯಾಕ್‌ಬೆತ್‌ನ ಕ್ರೋಧಾಗ್ನಿಯು ಉಜ್ವಲವಾಯಿತು. ಅವನು ಮ್ಯಾಕ್‌ಡಫ್‌ನ ಭವನದ ಮೇಲೆ ನುಗ್ಗಿ, ಅವನ ಹೆಂಡತಿ ಮಕ್ಕಳನ್ನು ಸಂಹರಿಸಿದನು. ಈ ಕೃತ್ಯವು ಇಷ್ಟಕ್ಕೇ ನಿಲ್ಲದೆ, ಮ್ಯಾಕ್‌ಡಫ್‌ನ ಅತಿ ದೂರ ಬಂಧುಗಳವರೆಗೂ ವ್ಯಾಪಿಸಿತು.

ಇದರಿಂದಲೂ ಮತ್ತು ಇಂತಹ ಅನೇಕ ಇತರ ಕೃತ್ಯಗಳಿಂದಲೂ ರಾಜಸದಸ್ಯರು, ಪರಿವಾರದವರು, ಮೊದಲಾದವರಿಗೆ ಇವನಲ್ಲಿ ಜುಗುಪ್ಸೆಯು ಹುಟ್ಟಿತು. ಅನುಕೂಲವಿದ್ದವರು ಇಂಗ್ಲೆಂಡಿಗೆ ಓಡಿಹೋಗಿ, ಪ್ರಬಲತರವಾದ ಸೈನ್ಯದೊಡನೆ ಮುಂಬರಿಯುತ್ತಿದ್ದ ಮ್ಯಾಲ್‌ಕೋಂ ಮತ್ತು

ಮ್ಯಾಕ್‌ಡಫ್‌ರ ಕಡೆ ಸೇರಿಕೊಂಡರು. ಅನುಕೂಲವಿಲ್ಲದವರು ಮ್ಯಾಕ್‌ಬೆತ್‌ಗೆ ಭೀತರಾಗಿ, ಹೊರಗೆ ಅವನಿಗಾಗಿ ಕಾದುವವರಂತೆ ಕಾಣಿಸಿಕೊಳ್ಳುತ್ತ, ಅಂತರಂಗದಲ್ಲಿ, ಮ್ಯಾಲ್‌ಕೋಂ ಮ್ಯಾಕ್‌ಡಫ್‌ರ ಸೈನ್ಯಕ್ಕೆ ಜಯವಾಗಲೆಂದು ಹಾರೈಸುತ್ತಿದ್ದರು.

ಮ್ಯಾಕ್‌ಬೆತ್‌ನ ಸೇನಾಸನ್ನಾಹವು ಮಂದಗತಿಗೆ ಬಿದ್ದಿತು. ಈ ಕ್ರೂರಾಧಿಪತಿಯನ್ನು ಎಲ್ಲರೂ ಶಪಿಸತೊಡಗಿದರು. ಪ್ರತಿಯೊಬ್ಬರಿಗೂ ಇವನಲ್ಲಿ ಸಂಶಯವೇ. ಭಕ್ತಿಯೆಂಬುದು ಲೇಶವಾದರೂ ಇರಲಿಲ್ಲ. ಎಲ್ಲರೂ ಇವನ ಕ್ರೌರ್ಯಕ್ಕೆ ಹೆದರಿ ಮೇಲೆಮೇಲೆ ಮನ್ನಿಸುವರು. ಅವನ ಸ್ಥಿತಿಯು ಎಷ್ಟು ಶೋಚನೀಯವಾಯಿತೆಂದರೆ, ತಾನು ಕೈಯಾರ ದ್ರೋಹದಿಂದ ಕೊಂದ ಡನ್‌ಕನ್‌ನೇ ತನಗಿಂತ ಸುಖಿಯೆಂಬ ಹಾಗಾಯಿತು. ಏಕೆಂದರೆ, ಅವನು ಈಗ ಶಾಂತನಾಗಿ ಸಮಾಧಿಯಲ್ಲಿದ್ದನು ; ಆಯುಧವಾಗಲಿ, ಪಾಷಾಣವಾಗಲಿ, ಗೃಹಚ್ಛಿದ್ರವಾಗಲಿ, ಪರರಾಜ್ಯದ ಸೈನ್ಯವಾಗಲಿ, ಅವನಿಗೇನೂ ಉಪಹತಿಯನ್ನುಂಟುಮಾಡುವಂತಿರಲಿಲ್ಲ.

ಹೀಗಿರಲು, ಇವನ ದುರ್ವೃತ್ತಿಗಳಿಗೆಲ್ಲ ಮುಖ್ಯ ಭಾಗಿನಿಯೂ ಪ್ರೇರಕಳೂ ಆಗಿದ್ದ ಇವನ ಹೆಂಡತಿಯು ಮಡಿದಳು. ಇದುವರೆಗೆ ಇವನು ಅವಳಲ್ಲಿ ತನ್ನ ದೆಸೆಯನ್ನು ಹೇಳಿಕೊಳ್ಳುತ್ತ, ಪ್ರತಿರಾತ್ರಿಯೂ ಉಭಯರೂ ಅನುಭವಿಸುತ್ತಿದ್ದ ಭಯಂಕರವಾದ ದುಸ್ವಪ್ನಗಳ ಸಂತಾಪವನ್ನು ಸ್ವಲ್ಪ ಶಮನಮಾಡಿಕೊಳ್ಳುತ್ತಿದ್ದನು. ಅವಳು ತನ್ನ ಅಪರಾಧಗಳ ದೆಸೆಯಿಂದ ಹುಟ್ಟಿದ ಸಂತಾಪದಿಂದಲೂ ಲೋಕನಿಂದೆಯಿಂದಲೂ ಮನಸೊಂದು ತಡೆಯಲಾರದೆ ಆತ್ಮಹತ್ಯೆ ಮಾಡಿಕೊಂಡಳೆಂದು ತೋರುತ್ತದೆ. ಅಂತು ಅವಳ ಮರಣದಿಂದ ಇವನನ್ನು ಪ್ರೀತಿಸುವಂತಹವರಾಗಲಿ, ಪೋಷಿಸುವಂತಹವರಾಗಲಿ, ದುರ್ಮಂತ್ರಗಳನ್ನು ಕೇಳುವಂತಹವರಾಗಲಿ ಯಾರೂ ಇಲ್ಲವಾಯಿತು.

ಆದ್ದರಿಂದ ಇವನಿಗೆ ತನ್ನ ಬಾಳಿನಲ್ಲಿ ಬೇಸರಿಕೆ ಹುಟ್ಟಿ ಸಾವು ಬಂದರೆ ಸಾಕೆನ್ನುವ ಹಾಗಾಯಿತು. ಆದರೂ ಮ್ಯಾಲ್‌ಕೋಂನ ಸೈನ್ಯವು ಸನ್ನಿಹಿತವಾಗುತ್ತಿದೆಯೆಂಬ ಮಾತನ್ನು ಕೇಳಿದುದರಿಂದ ಅವನ ಪೂರ್ವ

ಪರಾಕ್ರಮವು ಮತ್ತೆ ಉತ್ತೇಜಿತವಾಯಿತು. ಆಗ ಅವನು "ಸಾಯುವು ದಾದರೆ ಆಯುಧಪಾಣಿಯಾಗಿ ಕದನದಲ್ಲಿ ಕಾದಿ ಸಾಯುವೆನು" ಎಂದು ಕೊಂಡನು. ಈ ಮಧ್ಯೆ ಆ ಮಾಟಗಾತಿಯರು ಹೇಳಿದ್ದ "ಹೆಂಗಸಿನಿಂದ ಹುಟ್ಟಿ ಬಂದ ಯಾವನೂ ನಿನ್ನನ್ನು ಕೊಲ್ಲಲಾರನು" ಎಂಬ ಭರವಸೆಯ ಮಾತೂ, "ಬರ್ನಂ ಕಾಡು ಡನ್‌ಸಿನೇನ್ ಬೆಟ್ಟಕ್ಕೆ ಬಂದಲ್ಲದೆ ಭಯವಿಲ್ಲ" ಎಂಬ ಭರವಸೆಯ ಮಾತೂ, ಅವನ ಮನಸ್ಸಿಗೆ ಧೈರ್ಯ ಕೊಡುತ್ತಿದ್ದುವು. ಅಂತು ಆ ಮಾತುಗಳಲ್ಲಿ ವೃಥಾ ನಂಬಿಕೆಯಿಟ್ಟು, ಅಭೇದ್ಯವಾದ ತನ್ನ ದುರ್ಗದಲ್ಲಿ ಅಡಗಿಕೊಂಡನು.

ಅಲ್ಲಿ ಅವನು ಸಿಡಿಮಿಡಿಗುಟ್ಟುತ್ತಾ, ತನ್ನ ಪ್ರತಿಕಕ್ಷಿಯ ಆಗಮನವನ್ನೇ ನಿರೀಕ್ಷಿಸುತ್ತಿದ್ದನು. ಹೀಗಿರಲು ಒಂದು ದಿನ ಒಬ್ಬ ದೂತನು ಭಯದಿಂದ ಗಡಗಡನೆ ನಡುಗುತ್ತಾ, ಬಿಳುಪೇರಿದ ಮುಖವುಳ್ಳವನಾಗಿ, ತಾನು ಕಂಡುದನ್ನು ಹೇಳುವುದಕ್ಕೂ ಕೈಲಾಗದೆ, ತಬ್ಬಿಬ್ಬಾಗಿ ಇವನೆದುರಿಗೆ ಬಂದು ನಿಂತನು. ಏನೆಂದು ಕೇಳಲು, ಆ ಆಳು ತಾನು ಬೆಟ್ಟದ ಮೇಲೆ ಕಾವಲುಕೊಡುವ ಮನೆಯ ಮೇಲ್ಭಾಗದಿಂದ ನೋಡುತ್ತಿರಲು, ಬರ್ನಂ ಕಾಡು ತನ್ನ ಕಡೆಗೆ ಬರುವುದಕ್ಕೆ ಆರಂಭವಾಯಿತೆಂದು ಹೇಳಿದನು. ಮ್ಯಾಕ್‌ಬೆತ್‌ನು ಅಪ್ರತಿಭ ನಾಗಿ "ಸುಳ್ಳುಗಿಳ್ಳು ಹೇಳೀಯೆ, ಗುಲಾಮ! ನೀನೇನಾದರೂ ಸುಳ್ಳು ಹೇಳಿದ್ದರೆ ನಿನ್ನನ್ನು ಆ ಮರಕ್ಕೆ ನೇಣುಹಾಕಿಸುವೆನು. ನಿನ್ನ ಶರೀರವು ಅಲ್ಲಿಯೇ ಗಳಿತವಾಗಿ ಹೋಗುವವರೆಗೆ ಇರಬೇಕಾದೀತು. ನೀನು ಹೇಳಿದುದು ನಿಜವಾದರೆ ಚಿಂತೆಯಿಲ್ಲ.—ನನ್ನ ಅವಸ್ಥೆಯೂ ಅಲ್ಲಿಗೇ ಬಂದೀತು!" ಎಂದು ಹೇಳಿದನು. ಅವನ ಸಿದ್ಧಾಂತಗಳು ಈಗ ಸಡಿಲಿದುವು. ಆ ಭೂತಗಳು ಹೇಳಿದ ಮಾತುಗಳಿಗೆ ದ್ವಂದ್ವಾರ್ಥವುಂಟೋ ಎಂದು ಅವನು ಅನುಮಾನಪಡತೊಡಗಿದನು. ಬರ್ನಂ ಕಾಡು ಡನ್‌ಸಿನೇನ್ ಬೆಟ್ಟಕ್ಕೆ ಬರುವವರೆಗೆ ತನಗೆ ನಿರಪಾಯವೆಂದು ಇವನು ಧೈರ್ಯವಾಗಿದ್ದನು. ಇನ್ನೇನು? ಕಾಡು ಚಲಿಸುತ್ತಿರುವುದು! "ಇವನು ಹೇಳುವುದು ನಿಜ ವಾದರೆ, ಆಯುಧಪಾಣಿಯಾಗಿ ಹೊರಡುವೆನು. ಇಲ್ಲಿಂದ ಪಲಾಯನ ವಾಗುವುದಾಗಲಿ, ಇಲ್ಲಿಯೇ ಇರುವುದಾಗಲಿ, ಯಾವುದೂ ಸಾಧ್ಯವಲ್ಲ.

ನನಗೆ ಪ್ರಪಂಚವು ಬೇಸರವನ್ನುಂಟುಮಾಡುತ್ತಿದೆ. ಈ ಜೀವಿತವು ಮುಗಿದರೆ ಸಾಕೆನ್ನಿಸುತ್ತಿದೆ" ಎಂದು ಅವನು ನಿರಾಶಾಪರವಾದ ಮಾತುಗಳನ್ನು ಆಡಿಕೊಳ್ಳುತ್ತ, ಸೈನ್ಯಾಭಿಮುಖನಾದನು. ಆ ವೇಳೆಗೆ ಶತ್ರು ಸೈನ್ಯವು ಇವನ ಭವನವನ್ನು ಸಮೀಪಿಸಿದ್ದಿತು.

ಅರಣ್ಯವು ಚಲಿಸುತ್ತಿರುವಂತೆ ಆ ದೂತನಿಗೆ ತೋರಿಬಂದ ಅಪೂರ್ವ ದೃಶ್ಯದ ಗುಟ್ಟು ಇಷ್ಟೇಯೆ :—ಮ್ಯಾಕ್‌ಬೆತ್‌ನ ಮೇಲೆ ದಂಡೆತ್ತಿ ಬರುತ್ತಿದ್ದ ಸೈನ್ಯವು ಆ ಕಾಡಿನಲ್ಲಿ ಬರುತ್ತಿರುವಾಗ್ಗೆ ಯುದ್ಧ ವಿದ್ಯಾನಿಪುಣನಾದ ದಳಪತಿ ಮ್ಯಾಲ್ಕೋಂನು ತನ್ನ ದಂಡಿನ ಪರಿಮಿತಿಯು ಶತ್ರುಪಕ್ಷದವರಿಗೆ ತಿಳಿಯದಂತೆ ಮಾಡುವುದಕ್ಕಾಗಿ ತನ್ನ ಕಡೆಯ ಪ್ರತಿಯೊಬ್ಬ ಯೋಧನೂ ಒಂದೊಂದು ಮರದ ಕೊಂಬೆಯನ್ನು ಕತ್ತರಿಸಿ ತನ್ನ ತನ್ನ ಮುಂದೆ ಹಿಡಿದು ಕೊಂಡು ಹೋಗುವಂತೆ ಅಪ್ಪಣೆ ಮಾಡಿದ್ದನು. ಮರದ ಕೊಂಬೆಗಳ ಸಹಿತವಾಗಿ ನಡೆದು ಬರುತ್ತಿರುವ ಈ ಸೈನ್ಯವನ್ನು ದೂರದಿಂದ ನೋಡಿ ಆ ದೂತನು ಅರಣ್ಯವೇ ಬರುತ್ತಿದೆಯೆಂದು ಹೆದರಿದನು. ಈ ಪ್ರಕಾರವಾಗಿ ಆ ಭೂತವು ಹೇಳಿದಮಾತು ಒಂದು ರೀತಿಯಲ್ಲಿ ನಿಜವಾಯಿತು. ಇದರಿಂದ ಅವನ ಬಹುಮುಖವಾದ ಭರವಸೆಗಳಲ್ಲಿ ಒಂದು ವಿಫಲವಾಯಿತು.

ತುಮುಲ ಯುದ್ಧಕ್ಕೆ ಮೊದಲಾಯಿತು. ಈ ಹೋರಾಟದಲ್ಲಿ ತನ್ನ ಸ್ನೇಹಿತರೆಂದು ಹೇಳಿಕೊಳ್ಳುತ್ತಿದ್ದವರಿಂದ ಕೂಡ ಮ್ಯಾಕ್‌ಬೆತ್‌ಗೆ ಸಹಾಯ ದೊರೆಯಲಿಲ್ಲ. ಅವರಿಗೆ ಈ ಕ್ರೂರಾಧಿಕಾರಿಯಲ್ಲಿ ದ್ವೇಷವು ನೆಲೆಗೊಂಡಿದ್ದುದು ಮಾತ್ರವಲ್ಲದೆ ಶತ್ರುಪಕ್ಷದವರಲ್ಲಿ ವಿಶ್ವಾಸವೂ ಇತ್ತು. ಆದರೂ ಮ್ಯಾಕ್‌ಬೆತ್‌ನು ಬಹಳ ಆಗ್ರಹದಿಂದಲೂ, ಪರಾಕ್ರಮದಿಂದಲೂ ಹೋರಾಡಿ, ತನ್ನ ವಿರೋಧಿಗಳಲ್ಲಿ ಅದಷ್ಟು ಮಂದಿಯನ್ನು ಕತ್ತರಿಸುತ್ತ ಬಂದನು. ಮ್ಯಾಕ್‌ಡಫ್‌ನನ್ನು ನೋಡುತ್ತಲೇ, ತನಗೆ ಆ ಭೂತವು "ಮ್ಯಾಕ್‌ಡಫ್‌ನ ವಿಚಾರದಲ್ಲಿ ಜಾಗರೂಕನಾಗಿರು" ಎಂದು ಹೇಳಿದ್ದ ಮಾತು ಜ್ಞಾಪಕಕ್ಕೆ ಬಂತು. ಆದುದರಿಂದ ಅವನೊಡನೆ ಯುದ್ಧಮಾಡದೆ ಹಿಂದಿರುಗುವುದರಲ್ಲಿದ್ದನು. ಆದರೆ ಆ ರಣರಂಗದಲ್ಲಿ ಇವನನ್ನೇ ಮ್ಯಾಕ್‌ಡಫ್‌ನು ಬಹಳ ಹೊತ್ತಿನಿಂದ ಹುಡುಕುತ್ತಿದ್ದನಾದುದರಿಂದ, ಅವನು ತನ್ನ ಪ್ರತಿಕಕ್ಷಿಯನ್ನು

ಹಿಂದಿರುಗಬಿಡಲಿಲ್ಲ. ನಿರಾಯುಧರಾದ ತನ್ನ ಸತಿಸುತರನ್ನು ಕೊಲೆಮಾಡಿ ದುದಕ್ಕಾಗಿ ಅವನನ್ನು ಬಹಳವಾಗಿ ಹೀಯಾಳಿಸಿ ನಿಂದಿಸಿದನು. ಆಗಲೂ ಅವನೊಡನೆ ಮ್ಯಾಕ್‌ಬೆತ್‌ನು ಯುದ್ಧಮಾಡುವಂತಿರಲಿಲ್ಲ. ಏಕೆಂದರೆ ಅವನು ಈಗಾಗಲೇ ಮ್ಯಾಕ್‌ಡಫ್‌ನ ಕುಟುಂಬದಲ್ಲಿ ಬಹುಜನರನ್ನು ಕೊಂದ ಪಾಪಕ್ಕೆ ಗುರಿಯಾಗಿದ್ದನು. ಆದ್ದರಿಂದ ಈಗ ಪ್ರಾಪ್ತವಾದ ದ್ವಂದ್ವ ಯುದ್ಧದಿಂದ ವಿಮುಖವಾಗುವುದರಲ್ಲಿ ಇದ್ದನು. ಆದರೆ ಮ್ಯಾಕ್‌ಡಫ್‌ನು ಬಿಡಲಿಲ್ಲ. ಅವನನ್ನು ಕ್ರೂರಿ, ಕೊಲೆಪಾತಕಿ, ನರಕದ ನಾಯಿ—ಎಂದು ಬಯ್ಯುತ್ತ ದ್ವಂದ್ವಯುದ್ಧಕ್ಕೆ ನಿಂತೇ ನಿಲ್ಲುವಂತೆ ಮಾಡಿದನು.

ಈಗ ಮ್ಯಾಕ್‌ಬೆತ್‌ನಿಗೆ ಭೂತವು ತನ್ನನ್ನು ಕುರಿತು "ಹೆಂಗಸಿನಿಂದ ಹುಟ್ಟಿ ಬಂದವನು ಯಾರೂ ನಿನ್ನನ್ನು ಕೊಲ್ಲಲಾರನು" ಎಂದು ಹೇಳಿದ ಮಾತು ಜ್ಞಾಪಕಕ್ಕೆ ಬಂದಿತು. ಆದ್ದರಿಂದ ಅವನು ಮ್ಯಾಕ್‌ಡಫ್‌ನನ್ನು ಕಂಡು ಮುಗುಳುನಗೆ ನಗುತ್ತ ಎಷ್ಟೋ ಭರವಸೆಯಿಂದ "ನೀನು ಮಾಡು ತ್ತಿರುವುದು ನಿಷ್ಫಲವಾದ ಕಾರ್ಯ. ಮ್ಯಾಕ್‌ಡಫ್! ನನ್ನನ್ನು ಕೊಲ್ಲು ವುದಕ್ಕೆ ಪ್ರಯತ್ನಮಾಡುವುದು ಗಾಳಿ ಗುದ್ದಿ ಕೈ ನೋಯಿಸಿಕೊಳ್ಳುವಂಥ ಕೆಲಸ! ಹೆಂಗಸಿನಿಂದ ಹುಟ್ಟಿ ಬಂದವನಾರೂ ನನ್ನನ್ನು ಕೊಲ್ಲಲಾರನೆಂದು ನನಗೆ ವರವಿದೆ" ಎಂದನು

ಮ್ಯಾಕಡಫ್:—ನಿನ್ನ ವರವನ್ನು ಸುಡು. ನೀನು ಆರಾಧಿಸುವ ಅನೃತವಾದಿಗಳಾದ ಆ ಭೂತಗಳನ್ನು ಕೇಳು. "ಮ್ಯಾಕ್‌ಡಫ್‌ನು ಎಲ್ಲರಂತೆ ಹುಟ್ಟಲಿಲ್ಲ; ಅಕಾಲದಲ್ಲಿ ಹುಟ್ಟಿದನು ಎಂದು ಅವುಗಳೇ ಹೇಳುವುವು" ಎಂದನು. ಮ್ಯಾಕ್‌ಬೆತ್‌ಗೆ ಇದ್ದ ಕೊನೆಯ ಭರವಸೆಯೂ ನೀರಾಯಿತು. ಅವನು ಕಂಪಿಸುತ್ತ "ನನಗೆ ಹೀಗೆಂದು ಹೇಳುವ ನಾಲಗೆ ಸೇದಿಹೋಗಲಿ! ಇನ್ನು ಮುಂದೆ ದ್ವಂದ್ವಾರ್ಥದ ಮಾತುಗಳನ್ನಾಡುವ ಮಂತ್ರಗಾತಿಯರಿಗೂ, ತಂತ್ರಿಗಳಾದ ಭೂತಗಳಿಗೂ ಯಾರೂ ಮರುಳಾಗ ದಿರಲಿ! ಅವರು ದ್ವಂದ್ವಾರ್ಥವುಳ್ಳ ಮಾತುಗಳನ್ನು ಆಡಿ, ಒಂದರ್ಥದಿಂದ ಆಶೆ ತೋರಿ ಮತ್ತೊಂದರ್ಥದಿಂದ ಭಂಗಗೊಳಿಸುವರು. ಮ್ಯಾಕ್‌ಡಫ್! ನಾನು ನಿನ್ನೊಡನೆ ಯುದ್ಧಮಾಡುವುದಿಲ್ಲ" ಎಂದನು.

ಮ್ಯಾಕಡಫ್ :—ಹಾಗಾದರೆ ಬದುಕಿರು. ಹುಲಿ ಸಿಂಹಗಳನ್ನು ಹಿಡಿದಿಟ್ಟು ತೋರಿಸುವಂತೆ "ಇಲ್ಲಿ ಕ್ರೂರಾವತಾರಿಯಾದ ಮನುಷ್ಯನನ್ನು ನೋಡಬಹುದು" ಎಂದು ಹಲಗೆಯ ಮೇಲೆ ಬಣ್ಣಗಳಿಂದ ಬರೆಯಿಸಿ ನಿನ್ನನ್ನು ತೋರಿಸುವೆವು.

ಈ ಮಾತನ್ನು ಕೇಳಿ ಮ್ಯಾಕ್‌ಬೆತ್‌ಗೆ ನಿರಾಶೆಯೂ ಧೈರ್ಯವೂ ಏಕಕಾಲದಲ್ಲಿ ಬಂದುವು. ಆದ್ದರಿಂದ ಅವನು "ಅದು ಎಂದಿಗೂ ಆಗದು! ಆ ಪೋರ ಮ್ಯಾಲ್ಕೋಂನ ಕಾಲಮೇಲೆ ಬಿದ್ದು ಜನರಿಂದ ಬೈಗಳು ತಿನ್ನುವುದಕ್ಕೋಸ್ಕರ ಬದುಕಿರಲೇ? ಎಂದಿಗೂ ಆಗದು! ಬರ್ನಂಕಾಡು ಡನ್‌ಸಿನೇನಿಗೆ ಬಂದರೂ, ಹೆಂಗಸಿನಿಂದ ಹುಟ್ಟಿಬಾರದ ನೀನು ನನ್ನ ಮೇಲೆ ಯುದ್ಧಕ್ಕೆ ನಿಂತಿದ್ದರೂ, ಕಡೆಯವರೆಗೆ ನಾನು ಮಾಡುವುದನ್ನು ಮಾಡಿ ನೋಡಿಯೇ ಬಿಡುತ್ತೇನೆ" ಹೀಗೆಂದು ಹುಚ್ಚುಹುಚ್ಚಾಗಿ ಮಾತನಾಡುತ್ತ, ಮ್ಯಾಕ್‌ಬೆತ್‌ನು ತನ್ನ ಪ್ರತಿಕಕ್ಷಿಯಮೇಲೆ ಬಿದ್ದನು. ಇಬ್ಬರೂ ಭಯಂಕರವಾಗಿ ಕಾದಾಡಿದರು. ಕೊನೆಗೆ ಮ್ಯಾಕ್‌ಡಫ್‌ನ ಕೈ ಮೇಲಾಯಿತು. ಅವನು ಶತ್ರುವಿನ ತಲೆಯನ್ನು ತರಿದು ರಾಜಕುವರನಾದ ಮ್ಯಾಲ್‌ಕೋಂಗೆ ಒಪ್ಪಿಸಿದನು. ಆತನು ಆ ರಾಜ್ಯಾಪಹಾರಿಯ ಭೇದೋಪಾಯಗಳಿಂದ ತಾನು ಈವರೆಗೆ ಕಳೆದುಕೊಂಡಿದ್ದ ಪ್ರಭುತ್ವವನ್ನು ಮತ್ತೆ ಪಡೆದು, ಪ್ರಜೆಗಳೂ ಪರಿವಾರದ ಶ್ರೀಮಂತರೂ ಸಂತೋಷಾತಿಶಯದಿಂದ ಜಯಧ್ವನಿಗೆಯ್ಯುತ್ತಿರಲು, ತನ್ನ ತಂದೆಯ ಸಿಂಹಾಸನವನ್ನೇರಿ ಚಿರಕಾಲ ಧರ್ಮದಿಂದ ಪ್ರಜಾಪರಿಪಾಲನೆ ಮಾಡುತ್ತಿದ್ದನು.

---

# ಒಥೆಲೊ

ವೆನಿಸ್ಸಿನಲ್ಲಿ ಬ್ರೈಬಾನ್‌ಷಿಯೊ ಎಂಬ ಒಬ್ಬಾನೊಬ್ಬ ಶ್ರೀಮಂತನಾದ ಮಂತ್ರಿ ಇದ್ದನು. ಆತನಿಗೆ ಗುಣವತಿಯೂ ರೂಪವತಿಯೂ ಆದ ಡೆಸ್ಡಿಮೋನಾ ಎಂಬ ಒಬ್ಬಳೇ ಮಗಳು. ಗುಣಸಂಪತ್ತಿಯಿಂದಲೂ, ಅಪಾರವಾದ ಭಾಗ್ಯಸಂಪನ್ನತೆಯಿಂದಲೂ ಕೂಡಿದ ಇವಳನ್ನು ವರಿಸಲು ನಾನು ತಾನೆಂದು ಹಲವರು ಕುತೂಹಲಪಡುತ್ತಿದ್ದರು.

ಆದರೆ ಇವಳು ತನ್ನನ್ನು ವಿವಾಹವಾಗಲು ಅಪೇಕ್ಷಿಸುತ್ತಿದ್ದವರಲ್ಲಿ ತನ್ನಂತೆ ಉನ್ನತ ಕುಲ ರೂಪ ಸಂಪನ್ನರಾದವರಾರನ್ನೂ ವರಿಸಲಿಲ್ಲ. ಏಕೆಂದರೆ, ಮುಖ ಸೌಂದರ್ಯಕ್ಕಿಂತ ಮನಸ್ಸೌಂದರ್ಯದಲ್ಲೇ ಅವಳಿಗೆ ಹೆಚ್ಚು ಗೌರವ. ಆದ್ದರಿಂದ ಅವಳು ಅಡಿಗಡಿಗೆ ತಮ್ಮ ಮನೆಗೆ ಅತಿಥಿಯಾಗಿ ಬರುತ್ತ ತನ್ನ ತಂದೆಯ ವಿಶ್ವಾಸಕ್ಕೆ ಪಾತ್ರನಾಗಿದ್ದ ಕೃಷ್ಣಕಾಯನಾದ ಒಥೆಲೊ ಎಂಬ ಮೂರ*ನನ್ನು ವರಿಸಿದಳು. ಇಂತಹ ಸ್ವಯಂವರವು ಅದ್ವಿತೀಯವಾದುದು.

ವರಸಾಮ್ಯವಿಲ್ಲದ ಇವನನ್ನು ವರಿಸಿದುದಕ್ಕಾಗಿ ಡೆಸ್‌ಡಿಮೋನಳನ್ನು ಸಂಪೂರ್ಣವಾಗಿ ದೂರುವುದಕ್ಕಾಗುವುದಿಲ್ಲ. ಒಥೆಲೋವು ಕೃಷ್ಣಕಾಯನೆಂಬುದೊಂದನ್ನುಳಿದು ಎಂತಹ ಘನವತಿಯಾದ ನಾರಿಯ ಪಾಣಿಗ್ರಹಣಕ್ಕಾದರೂ ಅರ್ಹನೇ ಸರಿ. ಅವನು ಧೈರ್ಯಶೌರ್ಯ ಸಂಪನ್ನನಾದ ಯೋಧನಾಗಿದ್ದನು; ತುರುಷ್ಕರ ಮೇಲೆ ನಡೆಸಿದ ಘೋರವಾದ ಯುದ್ಧದಲ್ಲಿ ಅವನು ತೋರಿಸಿದ ಅತುಳ ಪರಾಕ್ರಮಕ್ಕಾಗಿ ವೆನಿಸ್ಸಿನ ಸೈನ್ಯದ ಸರ್ವಸೇನಾಪತಿಯ ಪದವಿಯನ್ನು ಪಡೆದಿದ್ದನು.

ಇವನು ಅನೇಕ ದೇಶಗಳನ್ನು ಸಂಚಾರಮಾಡಿದ್ದನು. ಕಥೆಯನ್ನು ಕೇಳುವುದು ಸ್ತ್ರೀಸ್ವಭಾವ. ಆದ್ದರಿಂದ ಡೆಸ್‌ಡಿಮೋನಳು ಅವನ ಕಥೆಗಳನ್ನು ಬಹು ಆಸಕ್ತಿಯಿಂದ ಕೇಳುತ್ತಿದ್ದಳು. ಇವನು ತನಗೆ ಜ್ಞಾಪಕ

* "ಮೂರ್ (Moor) ಎಂಬುದು ಪೂರ್ವಕಾಲದಲ್ಲಿ ಆಫ್ರಿಕದ ಮೊರಾಕ್ಕೋ ಪ್ರಾಂತದ ಬಳಿ ವಾಸವಾಗಿದ್ದ ಬರ್ಬರ್-ಅರಬ್ಬೀ ಜನಾಂಗದ ಹೆಸರು

ವಿರುವಷ್ಟು ಹಿಂದಿನಕಾಲದಿಂದಲೂ ತನ್ನ ಜೀವಿತದಲ್ಲಿ ಸಂಭವಿಸಿದ ಅದ್ಭುತ ಘಟನಾವಿಶೇಷಗಳನ್ನೆಲ್ಲಾ ಹೇಳುತ್ತಿದ್ದನು. ಯುದ್ಧಗಳು, ಮುತ್ತಿಗೆಗಳು, ದ್ವಂದ್ವಯುದ್ಧಗಳು, ನೆಲದ ಮೇಲೂ ಸಮುದ್ರದ ಮೇಲೂ ನಡೆದ ಘೋರ ಯುದ್ಧಗಳು, ಆ ಯುದ್ಧಗಳಲ್ಲಿ ಪ್ರಾಣಾಪಾಯಕ್ಕೆ ಸಿಕ್ಕಿ ಕೂದಲೆಳೆಯಷ್ಟ ರಲ್ಲಿ ಪಾರಾದದ್ದು, ಕೋಟೆಯನ್ನು ಒಳಹೊಕ್ಕದ್ದು, ಗುಂಡಿನ ಬಾಯ ವರೆಗೆ ನುಗ್ಗಿ ಹೋದದ್ದು, ಆ ಅಪಾಯಗಳಿಂದ ಪಾರಾದದ್ದು, ಶತ್ರುಗಳ ಕೈಗೆ ಸೆರೆ ಸಿಕ್ಕಿ ದಾಸನಂತೆ ಮಾರಲ್ಪಟ್ಟದ್ದು, ಪಡಬಾರದ ಪಾಡು ಪಟ್ಟು ಅವರಿಂದ ಬಿಡುಗಡೆಹೊಂದಿ ಬಂದದ್ದು ಇವುಗಳನ್ನೆಲ್ಲಾ ಸ್ಪಷ್ಟವಾಗಿ ವರ್ಣಿಸಿ ಹೇಳುತ್ತಿದ್ದನು. ಇವಲ್ಲದೆ ದೇಶಾಂತರಗಳಲ್ಲಿ ತಾನು ಕಂಡ ವಿಜನ ಗೊಂಡಾರಣ್ಯಗಳು, ಅದ್ಭುತವಾದ ಗವಿಗಳು, ಗಣಿಗಳು, ಮುಗಿಲು ಮುಟ್ಟುವ ಪರ್ವತಗಳು, ಕಾಡುಜನರು, ಮನುಷ್ಯರನ್ನು ತಿನ್ನುವ ರಾಕ್ಷಸರು, ಕೊಂಕುಳ ಕೆಳಗೆ ತಲೆಯುಳ್ಳ ಆಫ್ರಿಕದ ಜನರು, ಮುಂತಾದ ವಿಚಿತ್ರ ವಿಚಾರಗಳನ್ನೂ ಹೇಳುತ್ತಿದ್ದನು. ಈ ದೇಶಾಂತರದ ಅದ್ಭುತ ವೃತ್ತಾಂತ ಗಳನ್ನು ಡೆಸ್‌ಡಿಮೋನಳು ಅತ್ಯಾದರದಿಂದ ಕೇಳುವಳು. ಆಗ ಏನಾದರೂ ಮನೆಗೆಲಸ ಇದ್ದರೆ, ಹೋಗಿ ಆ ಕೆಲಸವನ್ನು ಬಹಳ ಬೇಗ ಮುಗಿಸಿ ಕಥಾರಸವನ್ನು ಪೂರ್ತಿಯಾಗಿ ಪಾನಮಾಡಲು ಆತುರವಾಗಿ ಹಿಂದಿರುಗಿ ಬರುವಳು. ಹೀಗಿರಲು ಒಂದು ದಿನ ಆಕೆಯು ಅವನ ಜೀವಿತಕಾಲದ ಆ ವರೆಗಿನ ವಿದ್ಯಮಾನಗಳನ್ನೆಲ್ಲಾ ಸಾಂಗೋಪಾಂಗವಾಗಿ ಹೇಳಬೇಕೆಂದು ಈತನನ್ನು ಪ್ರಾರ್ಥಿಸಿಕೊಂಡಳು. ಆಗ ಅವನು ತನ್ನ ಯೌವನದಲ್ಲಿ ತಾನು ಅನುಭವಿಸಿದ ಅನೇಕಾನೇಕ ಕಷ್ಟಗಳನ್ನು ವರ್ಣಿಸಿ ಹೇಳುತ್ತಾ, ಆಕೆಯು ಮನ ಮರುಗಿ ಕಣ್ಣೀರು ಹಾಕುವಂತೆ ಮಾಡಿದನು. ಇದಕ್ಕೆ ಸಂಭಾವನೆಯಾಗಿ ಆಕೆಯು ನಿಟ್ಟುಸಿರುಬಿಟ್ಟು, "ಇವೆಲ್ಲವೂ ಆಶ್ಚರ್ಯಕರಗಳಾದ, ಅತ್ಯಾಶ್ಚರ್ಯಕರಗಳಾದ, ಸಂಗತಿಗಳಾಗಿಯೂ, ಹೃದಯವನ್ನು ಕರಗಿಸಿ ನೀರು ಮಾಡುವಂತಹ ಸಂತಾಪಕರಗಳಾದ, ಬಹು ಸಂತಾಪಕರಗಳಾದ, ಸುದ್ದಿ ಗಳಾಗಿಯೂ ಇವೆ. ಈ ಕಥೆಯನ್ನು ನಾನು ಕೇಳದೆಯೇ ಇರಬಾರದಾಗಿತ್ತೇ, ಅಥವಾ ಭಗವಂತನು ನನ್ನನ್ನು ಅಂಥ ಪುರುಷನನ್ನಾಗಿ ಮಾಡಬಾರದಾಗಿತ್ತೆ?



ಡೆಸ್ಡಿಮೋನಳು ಒಥೆಲೋವಿನ ಕಥೆಯನ್ನು ಕೇಳುವದು.

ನೀನು ಹೇಳಿದ ಕಥೆಗಳಿಗಾಗಿ ಕೃತಜ್ಞಳಾಗಿದ್ದೇನೆ. ನಿನ್ನ ಸ್ನೇಹಿತರಾರಾದರೂ ನನ್ನ ಮೇಲೆ ಪ್ರೀತಿಯಿಟ್ಟುಕೊಂಡಿದ್ದು ನನ್ನನ್ನು ಮದುವೆ ಮಾಡಿಕೊಳ್ಳ ಬೇಕೆಂದಿದ್ದರೆ ಅವರಿಗೆ ಚೆನ್ನಾಗಿ ಕಥೆ ಹೇಳುವುದನ್ನು ಕಲಿಸಿಕೊಡು ; ನಾನು ಅವರನ್ನು ಮದುವೆಮಾಡಿಕೊಂಡುಬಿಡುತ್ತೇನೆ" ಎಂದು ಹೇಳಿದಳು.

ಈ ಮಾತುಗಳನ್ನು ಆಕೆಯು ಕನ್ಯಾಸಹಜವಾದ ಲಜ್ಜೆಯಿಂದ ಹೇಳಿದಳು, ಸ್ಪಷ್ಟವಾಗಿ ಹೇಳಲಿಲ್ಲ. ಆದರೂ ಈ ಮಾತುಗಳ ಅರ್ಥವನ್ನೂ, ಮಾತನಾಡುವಾಗ್ಗೆ ಆಕೆಯಲ್ಲಿ ಮನೋಮೋಹಕವಾದ ವಿಲಾಸವೂ ಲಜ್ಜೆಯೂ ಉಂಟಾದುದನ್ನೂ ಒಥೆಲೋವು ಅರಿಯದೆ ಹೋಗಲಿಲ್ಲ. ಆದುದರಿಂದ ಇಂತಹ ಸುಸಂಧಿಯನ್ನು ನಿರರ್ಥಕಗೊಳಿಸದೆ, ತಾನು ಆಕೆಯಲ್ಲಿ ಅನುರಕ್ತನಾಗಿರುವ ಸಂಗತಿಯನ್ನು ಸ್ಪಷ್ಟವಾಗಿ ಅರುಹಿ, ಆ ಉದಾರ ಹೃದಯೆಯಾದ ಡೆಸ್‌ಡಿಮೋನಳನ್ನು ವಿವಾಹಕ್ಕೆ ಒಡಂಬಡಿಸಿದನು. ಒಥೆಲೋವಿನ ದೇಹವರ್ಣವಾಗಲಿ, ಭಾಗ್ಯಸಂಪದವಾಗಲಿ, ಅವನನ್ನು ತನ್ನ ಅಳಿಯನನ್ನಾಗಿ ಪರಿಗ್ರಹಿಸಲು ಬ್ರೆಬಾನ್‌ಷಿಯೋವು ಒಪ್ಪುವಂಥವಾಗಿರಲಿಲ್ಲ. ಅವನು ತನ್ನ ಮಗಳನ್ನು ಸ್ವತಂತ್ರವಾಗಿ ಬಿಟ್ಟಿದ್ದನು; ಆದರೆ ವೆನಿಸ್ಸಿನ ಶ್ರೀಮಂತ ಕುವರಿಯರಿಗೆ ಸಲುವಂತೆ ತನ್ನ ಸುತೆಯು ಯಾರಾದರೂ ಒಬ್ಬ ಶ್ರೀಮಂತನನ್ನೋ, ಅಥವಾ ಮುಂದೆ ಆ ಪದವಿಗೆ ಅರ್ಹನಾದವನನ್ನೋ ವರಿಸುವಳೆಂದು ನಿರೀಕ್ಷಿಸಿಕೊಂಡಿದ್ದನು. ಆದರೆ ಅವನ ನಿರೀಕ್ಷಣೆಯು ಕೈಗೂಡದಂತಾಯಿತು. ಡೆಸ್‌ಡಿಮೋನಳು ಕೃಷ್ಣಕಾಯದ ವರನನ್ನು ಅವನ ಧೈರ್ಯಸ್ಥೈರ್ಯ ಶೌರ್ಯಗಳಿಗಾಗಿಯೂ ಅವನ ಸದ್ಗುಣಗಳಿಗಾಗಿಯೂ ವರಿಸಿ ತನ್ನನ್ನೂ ತನ್ನ ಸರ್ವಸ್ವವನ್ನೂ ಆವನಿಗೆ ಸಮರ್ಪಿಸಿಕೊಂಡಳು. ಮಿಕ್ಕ ಹೆಂಗಸರಾರೂ ಇಂಥ ಕಪ್ಪುಬಣ್ಣದವನನ್ನು ಮದುವೆಮಾಡಿಕೊಳ್ಳಲು ಒಪ್ಪುತ್ತಿರಲಿಲ್ಲ. ಆದರೆ ಬಣ್ಣವು ಆಕೆಗೆ ಅಡ್ಡಿಯಾಗಿ ಬರಲಿಲ್ಲ. ತಾನು ವರಿಸಿದ ಪತಿಯಲ್ಲಿ ಅಪಾರವಾದ ಭಕ್ತಿ ಪ್ರಣಯಗಳು ಉಂಟಾಗಿದ್ದದ್ದರಿಂದ, ಅವಳು ತನ್ನನ್ನು ವರಿಸಲೆಳಸುತ್ತಿದ್ದ ಶ್ರೀಮಂತ ತರುಣರ ರೂಪ ಲಾವಣ್ಯಗಳಿಗಿಂತ ಅವನ ಕೃಷ್ಣವರ್ಣವನ್ನೇ ಹೆಚ್ಚು ಗೌರವಿಸುವಂತಾದಳು.

ಇವರ ವಿವಾಹವು ಅಂತರಂಗದಲ್ಲಿ ನಡೆಯಿತು. ಆದರೂ ಅದು

ಬಹುಕಾಲ ಗೋಪ್ಯವಾಗಿರಲಿಲ್ಲ. ಕಾಲಕ್ರಮದಲ್ಲಿ ಈ ವಿಚಾರವು ಆ ತರುಣಿಯ ತಂದೆಯ ಕಿವಿಗೆ ಬಿತ್ತು. ಆತನು ರಾಜಸಭಾಸದರನ್ನು ಸೇರಿಸಿ "ಒಥೆಲೋವು ಮಂತ್ರಮಾಟಗಳಿಂದ ನನ್ನ ಮುದ್ದುಗುವರಿಯಾದ ಡೆಸ್‌ಡಿಮೋನಳ ಅನುರಾಗವನ್ನು ಸಂಪಾದಿಸಿರುವನು. ಇದಕ್ಕಾಗಿ ತಂದೆಯಾದ ನನ್ನ ಅನುಮತಿಯನ್ನು ಪಡೆಯಲಿಲ್ಲ ನಮ್ಮಲ್ಲಿಗೆ ಇವನು ಅತಿಥಿಯಾಗಿ ಬರುತ್ತಿದ್ದು ಈರೀತಿ ಮಾಡಿರುವುದರಿಂದ ಇವನು ಉಂಡ ಮನೆಗೆ ಎರಡು ಬಗೆದ ಪಾತಕಿಯಾಗಿದ್ದಾನೆ" ಎಂದು ಅವನ ಮೇಲೆ ಅಪರಾಧವನ್ನು ಹೊರಿಸಿ ದೂರು ಹೇಳಿಕೊಂಡನು.

ಇದೇ ಸಂದರ್ಭದಲ್ಲಿ ವೆನಿಸ್ಸಿನ ಪ್ರಭುತ್ವದವರಿಗೆ ಒಥೆಲೋವಿನಿಂದ ಆಗಬೇಕಾದ ಮಹತ್ತಾದ ಕಾರ್ಯಬಿತ್ತು. ತುರುಷ್ಕರು ಬಲವತ್ತರವಾದ ಪ್ರಯತ್ನಗಳನ್ನು ಮಾಡಿ ಒಂದು ನೌಕಾಸೈನ್ಯವನ್ನು ಕೂಡಿಸಿ ವೆನಿಸ್ಸಿನವರ ಸ್ವಾಧೀನದಲ್ಲಿದ್ದ ಉತ್ಕೃಷ್ಟ ಜಲದುರ್ಗವಾದ ಸೈಪ್ರೆಸ್ಸನ್ನು ಮುತ್ತಲು ಬರುವುದಾಗಿ ಸಮಾಚಾರವು ಬಂದಿತ್ತು. ಈ ವೇಳೆಯಲ್ಲಿ ಸೈಪ್ರೆಸ್‌ನ ರಕ್ಷಣೆಗೂ, ತುರುಷ್ಕರನ್ನ ಗೆಲ್ಲುವುದಕ್ಕೂ ಸೈನ್ಯವನ್ನು ನಡೆಸಲು ಒಥೆಲೋವಿನ ಹೊರತು ಮತ್ತಾರೂ ಶಕ್ತರಲ್ಲವೆಂದು ರಾಜಸಭಿಕರು ಅಭಿಪ್ರಾಯಪಟ್ಟರು. ಆದುದರಿಂದ ಒಥೆಲೋವನ್ನು ಸಭೆಗೆ ಬರಮಾಡಿಕೊಂಡರು. ಅವನು ಒಂದುಕಡೆ ರಾಜಕೀಯ ಮಹಾಕಾರ್ಯದಲ್ಲಿ ನಿಯೋಜಿತನಾಗುವುದಕ್ಕೆ ತಕ್ಕ ಅಧಿಕಾರಿಯಾಗಿಯೂ ಇನ್ನೊಂದು ಕಡೆ, ವೆನಿಸ್ಸಿನ ನ್ಯಾಯನಿಬಂಧನೆಯಂತೆ, ಮರಣದಂಡನೆಗೆ ಅರ್ಹವಾದ ಅಪರಾಧದಿಂದ ಆರೋಪಿತನಾಗಿಯೂ ಬಂದು ನಿಂತನು. ಬ್ರೆಬಾನ್‌ಷಿಯೋವು ವೃದ್ಧ; ರಾಜತಂತ್ರ ವಿಶಾರದ; ಆದುದರಿಂದ ಇವನ ಹೇಳಿಕೆಯನ್ನು ಸಭಿಕರು ಶಾಂತಚಿತ್ತರಾಗಿ ಲಾಲಿಸಿದರು. ಆದರೆ ಇವನು ಕೋಪಾಕುಲಿತನಾಗಿ, ತಾನು ಹೇಳುವ ಸಂಗತಿಗಳನ್ನು ಸಿದ್ಧಾಂತಗೊಳಿಸಲು ಊಹೆಗಳನ್ನೂ ಅತ್ಯುಕ್ತಿಗಳನ್ನೂ ತಂದು ಒಡ್ಡಿದನು. ಇದಾದ ಮೇಲೆ ಸಭಿಕರು ಒಥೆಲೋವನ್ನು ಕರೆದು "ನಿನ್ನ ಮೇಲೆ ಹೊತ್ತಿರುವ ಈ ಅಪರಾಧಕ್ಕೆ ಸಮಾಧಾನವಾಗಿ ನೀನೇನು ಹೇಳುವೆ?" ಎಂದು ಕೇಳಲಾಗಿ, ಅವನು ತನ್ನ ಪ್ರಣಯ

ವಿಚಾರವನ್ನು ಅತಿಸರಳವಾದ ರೀತಿಯಲ್ಲಿ ಹೇಳಿಕೊಂಡನು. ಹಿಂದೆಯೇ ತಿಳಿಸಿರುವಂತೆ, ತನ್ನ ಚರಿತ್ರೆಯನ್ನು ತಾನು ಡೆಸ್‌ಡಿಮೋನಳಿಗೆ ಹೇಳುತ್ತಿದ್ದದ್ದೂ ಆಕೆಯು ಅದನ್ನು ಶ್ರದ್ಧೆಯಿಂದಲೂ ಉತ್ಸಾಹದಿಂದಲೂ ಕೇಳುತ್ತಿದ್ದದ್ದೂ ಆಕೆಗೆ ತನ್ನಲ್ಲಿ ಅನುರಾಗ ಹುಟ್ಟಲು ಕಾರಣಗಳಾದುವೆಂದೂ, ತಾನು ಯಾವ ಮಂತ್ರತಂತ್ರಗಳಿಂದಲೂ ಆಕೆಯನ್ನು ಮೆಚ್ಚಿಸಿ ಪಡೆದವನಲ್ಲ ವೆಂದೂ ಅತ್ಯುಕ್ತಿ ಅಲಂಕಾರಗಳಿಲ್ಲದ ಸ್ಪಷ್ಟ ಋಜುಶೈಲಿಯಲ್ಲಿ ಅರಿಕೆಮಾಡಿಕೊಂಡನು. ಸಭಾಧ್ಯಕ್ಷನಾಗಿದ್ದ ರಾಜನು ''ಇಂಥ ಕಥೆ ಹೇಳಿದವನನ್ನು ನನ್ನ ಮಗಳೂ ಮದುವೆಮಾಡಿಕೊಂಡು ಬಿಡುತ್ತಿದ್ದಳೋ ಏನೋ ಎಂದು ಯೋಚನೆಯಾಗಿದೆ'' ಎಂದನು. ''ಪ್ರಣಯಿಗಳು ತಮ್ಮ ಪ್ರಿಯೆಯ ಪ್ರಣಯವನ್ನು ಪಡೆಯಲು ಅವಲಂಬಿಸುವ ಸಾಮಾನ್ಯ ವಿಧಾನಗಳನ್ನೇ ಈತನೂ ಅನುಸರಿಸಿರುವನು. ಮನಮರುಗಿಸುವಂತಹ ಕಥೆಯನ್ನು ಚಮತ್ಕಾರವಾದ ರೀತಿಯಲ್ಲಿ ಹೇಳುವ ಶಕ್ತಿಯೇ ಇವನ ಮಂತ್ರಶಕ್ತಿ'' ಎಂದು ರಾಜನೂ ರಾಜ ಸಭಿಕರೂ ತೀರ್ಮಾನಿಸಿಕೊಂಡರು. ಇದಾದ ಸ್ವಲ್ಪ ಹೊತ್ತಿಗೆ ರಾಜಸಭೆಗೆ ಬಂದು ತನ್ನ ವೃತ್ತಾಂತವನ್ನು ಹೇಳಿಕೊಂಡ ಡೆಸ್‌ಡಿಮೋನಳ ಮಾತುಗಳಿಂದ ಇದು ಸ್ಥಿರಪಟ್ಟಿತು. ಡೆಸ್‌ಡಿಮೋನಳು ''ತಂದೆಯೇ, ಇಲ್ಲಿ ನನ್ನ ಕರ್ತವ್ಯವು ದ್ವಿಮುಖವಾಗಿದೆ. ತಾವು ನನಗೆ ಜನ್ಮವನ್ನೂ ವಿದ್ಯೆಯನ್ನೂ ದಯಪಾಲಿಸಿದಿರಿ. ತಮ್ಮಲ್ಲಿ ನಾನು ಸರ್ವದಾ ಕರ್ತವ್ಯನಿಷ್ಠೆಯಿಂದ ಕೃತಜ್ಞಳಾಗಿರುವೆನು. ಈ ಕರ್ತವ್ಯನಿಷ್ಠೆಗಿಂತಲೂ ಮಿಗಿಲಾದ ಕರ್ತವ್ಯವು ನನ್ನ ಪತಿಭಕ್ತಿ. ನಮ್ಮ ತಾಯಿಯು ತನ್ನ ತಂದೆಗಿಂತಲೂ ನಿಮ್ಮಲ್ಲಿ ಹೆಚ್ಚು ಧರ್ಮನಿಷ್ಠೆಯುಳ್ಳವಳಾಗಿರಲಿಲ್ಲವೇ? ಆ ನಿಷ್ಠೆಯನ್ನು ನಾನೂ ಈತನಲ್ಲಿ ಸಮರ್ಪಿಸಿರುವೆನು'' ಎಂದು ಹೇಳಿದಳು.

ಬ್ರೆಬಾನ್‌ಷಿಯೋವಿಗೆ ತನ್ನ ವ್ಯವಹಾರವನ್ನು ಮುಂದುವರಿಸಲು ಆಗಲಿಲ್ಲ. ಆದುದರಿಂದ ಅವನು ''ನಿನ್ನನ್ನು ದೇವರು ಸಂರಕ್ಷಿಸಲಿ. ನನ್ನ ಕೆಲಸವಾಯಿತು. ಪ್ರಭುವೇ, ಸಭಾಸದರೆ, ಇನ್ನು ರಾಜಕಾರ್ಯವನ್ನು ಕುರಿತು ಯೋಚಿಸೋಣ. ಆಹಾ! ಮಕ್ಕಳನ್ನು ಪಡೆಯುವುದಕ್ಕಿಂತಲೂ ಸೌಶೀಲ್ಯಾದಿಗಳನ್ನು ನೋಡಿ ದತ್ತಸ್ವೀಕಾರಮಾಡಿಕೊಳ್ಳುವುದು ಉತ್ತಮ!

ಅಯ್ಯಾ ಮೂರನೇ, ಇತ್ತ ಬಾ. ನೀನು ಈಗಾಗಲೇ ಪಡೆದುಕೊಂಡಿರುವ ಈಕೆಯನ್ನು ನಿನಗೆ ಕೊಟ್ಟಿದ್ದೇನೆ. ನನ್ನ ಅಭಿಲಾಷೆಗೆ ವಿರುದ್ಧವಾಗಿ ನಿನ್ನನ್ನು ಅಳಿಯನನ್ನಾಗಿ ಪರಿಗ್ರಹಿಸಬೇಕಾಗಿದೆ. ಆದದ್ದಾಯಿತು. ನಿನಗೆ ಈಕೆಯು ಅಮೌಲ್ಯಾಭರಣವಾಗಿರುವಳು. ನನಗೆ ಇನ್ನು ಮಕ್ಕಳಿಲ್ಲ ವೆಂಬುದೇ ಒಂದು ಆನಂದವಾದ ವಿಷಯವಾಗಿದೆ, ಇದ್ದಿದ್ದರೆ ಓಡಿಹೋಗ ದಂತೆ ಕ್ರೂರತನದಿಂದ ಅವರಿಗೆ ಕೊಂಟುಗಳನ್ನು ಕಟ್ಟಿ ಕೂರಿಸುತ್ತಿದ್ದೆ" ಎಂಬುದಾಗಿ ವ್ಯಸನಾಕ್ರಾಂತನಾಗಿ ಹೇಳಿಕೊಂಡನು. ಈ ರೀತಿಯಲ್ಲಿ ಸಾಂಸಾರಿಕ ವ್ಯವಹಾರವು ಮುಗಿಯಿತು. ಒಥೆಲೋವು ಸೈಪ್ರೆಸ್‌ನ ಯುದ್ಧಕಾರ್ಯನಿರ್ವಾಹಕ್ಕಾಗಿ ಆಕ್ಷಣವೇ ಅಣಿಯಾದನು. ಮನುಷ್ಯ ಸಾಮಾನ್ಯಕ್ಕೆ ಆಹಾರ ನಿದ್ರಾದಿಗಳು ಎಷ್ಟು ಸಾಧಾರಣವಾದವುಗಳೋ, ಹಾಗೆಯೇ ಒಥೆಲೋವಿಗೆ ಯುದ್ಧಕಾರ್ಯಗಳ ಕಠಿಣತರವಾದ ಜೀವಿತವು ಅಭ್ಯಾಸಬಲದಿಂದ ಸ್ವಾಭಾವಿಕವಾಗಿ ಪರಿಣಮಿಸಿದ್ದಿತು. ಅಪಾಯಪ್ರದ ವಾದುದಾದರೂ ತನ್ನ ಪತಿಯ ಈ ಕಾರ್ಯಗೌರವದಲ್ಲಿ ಡೆಸ್‌ಡಿಮೋನಳು ಶ್ರದ್ಧೆಯುಳ್ಳವಳಾದಳು. ನೂತನವಧೂವರರೆಂದು ಅವರು ನಿರರ್ಥಕವಾದ ಸಂತೋಷಗಳಲ್ಲಿ ಮಗ್ನರಾಗಿ ಕಾಲಕಳೆಯುವವರಾಗಿರಲಿಲ್ಲ. ಆದ್ದರಿಂದ ಆಕೆಯು ಸಂತೋಷದಿಂದ ಪತಿಯ ಪ್ರಯಾಣಕ್ಕೆ ಸಮ್ಮತಿಸಿದಳು.

ಒಥೆಲೋವು ಸಪತ್ನೀಕನಾಗಿ ಸೈಪ್ರೆಸ್ಸನ್ನು ತಲಪಿದ ಕೆಲವು ಗಳಿಗೆ ಗಳಲ್ಲಿಯೇ, ಒಂದು ಬಲವತ್ತರವಾದ ಬಿರುಗಾಳಿಯಿಂದ ತುರುಷ್ಕರ ನೌಕಾ ಸೈನ್ಯವು ಅವ್ಯವಸ್ಥಿತವಾಯಿತೆಂದು ಸಮಾಚಾರವು ತಿಳಿಯಬಂದಿತು. ಆದುದರಿಂದ ತತ್ಕಾಲದಲ್ಲಿಯೇ ಆ ದ್ವೀಪಕ್ಕೆ ಶತ್ರುಭಯವೇನೂ ಇಲ್ಲ ವಾಯಿತು. ಆದರೆ ಒಥೆಲೋವು ದುಸ್ಸಹವಾಗಿ ಅನುಭವಿಸಬೇಕಾದ ಮತ್ತೊಂದು ಬಗೆಯ ಯುದ್ಧವು ಉಪಕ್ರಮವಾಯಿತು. ಹಸುಮಗುವಿನಂತೆ ನಿರ್ಮಲಸ್ವಭಾವದವಳಾದ ಇವನ ಮಡದಿಯ ವಿಚಾರದಲ್ಲಿ ಮಾತ್ಸರ್ಯ ಬುದ್ಧಿಯುಳ್ಳ ಹಗೆಗಳು ಈ ಯುದ್ಧವನ್ನು ಆರಂಭಿಸಿದರು. ಇದು ಪ್ರತಿ ಭಟರಾಗಿ ನಿಂತ ಶತ್ರುಗಳ ಕದನಕ್ಕಿಂತಲೂ ಕ್ರೂರತರವಾಗಿಯೂ ಪ್ರಮಾದ ಕಾರಿಯಾಗಿಯೂ ಆಯಿತು.

ಒಥೆಲೋವಿನ ಸ್ನೇಹಿತರಲ್ಲೆಲ್ಲಾ ಕ್ಯಾಷಿಯೋ ಎಂಬವನು ಇವನಿಗೆ ಅತ್ಯಂತ ಸಂಬಿಕೆಗೆ ಪಾತ್ರನಾಗಿದ್ದನು. ಕ್ಯಾಷಿಯೋವು ಪ್ರಬುದ್ಧ ವಯಸ್ಸಿನವನೂ, ಒಳ್ಳೆಯ ಯೋಧನೂ, ಸ್ತ್ರೀಜನಪ್ರಿಯವಾದ ಉತ್ಸಾಹ ಸಂತೋಷ ವಿನೋದಗಳಲ್ಲಿ ಪ್ರೀತಿಯುಳ್ಳವನೂ, ಮನೋಮೋಹಕವಾದ ನಡೆವಳಿಕೆಯವನೂ, ರೂಪವಂತನೂ ಆಗಿದ್ದನು. ಒಥೆಲೋವು ತನ್ನ ಅಪರವಯಸ್ಸಿನಲ್ಲಿ ರೂಪವತಿಯೂ ಪೂರ್ವ ವಯಸ್ಸಿನವಳೂ ಆದ ವನಿತೆಯನ್ನು ಮದುವೆಯಾಗಿದ್ದನು. ಆಕೆಯೊಡನೆ ಕ್ಯಾಷಿಯೋ ಅಂಥವನು ಮಾತುಕಥೆಗಳನ್ನಾಡುವುದು ಅನುಮಾನಮಾತ್ಸರ್ಯಗಳನ್ನುಂಟುಮಾಡಲು ಒಥೆಲೋವಿಗೆ ಸಾಕಾದಷ್ಟು ಕಾರಣವಾಗಿದ್ದಿತು. ಆದರೂ ಒಥೆಲೋವು ಗಂಭೀರ ಮನೋಭಾವವುಳ್ಳವನಾಗಿಯೂ, ಮಾತ್ಸರ್ಯಾದಿ ಅವಗುಣಗಳಿಗೆ ದೂರನಾಗಿಯೂ, ಹೀನಕಾರ್ಯ ಪರಾಙ್ಮುಖನಾಗಿಯೂ ಇದ್ದನು.

ಇವನು ತನ್ನ ಪ್ರಣಯಕಾರ್ಯೋದ್ಯಮದಲ್ಲಿ ಕ್ಯಾಷಿಯೋವನ್ನು ಮಧ್ಯಸ್ಥಗಾರನನ್ನಾಗಿ ಮಾಡಿಕೊಂಡಿದ್ದನು. ಸ್ತ್ರೀಯರ ಮನಮೆಚ್ಚಿಕೆಯನ್ನು ಸಂಪಾದಿಸಲು ಬೇಕಾದ ಇನಿದಾದ ವಾಕ್ಸರಣಿಯು ತನಗೆ ಅಭ್ಯಾಸವಿಲ್ಲದ್ದರಿಂದಲೂ, ಈ ಗುಣಗಳು ಕ್ಯಾಷಿಯೋವಿನಲ್ಲಿ ಇದ್ದದ್ದರಿಂದಲೂ, ಒಥೆಲೋವು ಕ್ಯಾಷಿಯೋವನ್ನು ಆಕೆಯ ಬಳಿಗೆ ತನ್ನ ಕಾರ್ಯಸಾಧನೆಗಾಗಿ ಆಗಾಗ್ಗೆ ಕಳುಹಿಸುತ್ತಿದ್ದನು. ನಿಷ್ಕಪಟವಾದ ಸರಳಸ್ವಭಾವದವನಾಗಿದ್ದದ್ದರಿಂದ ಒಥೆಲೋವಿಗೆ ಇದು ಒಂದು ಭೂಷಣವಾಗಿತ್ತೇ ಹೊರತು ದೂಷಣವಾಗಿರಲಿಲ್ಲ. ಡೆಸ್‌ಡಿಮೋನಳೂ ಭಾರ್ಯಾ ಸೌಶೀಲ್ಯಕ್ಕೆ ಲೋಪವಿಲ್ಲದಂತೆ ಕ್ಯಾಷಿಯೋವಿನಲ್ಲಿ ದಯೆದಾಕ್ಷಿಣ್ಯಗಳಿಂದೊಡಗೂಡಿ ಧಾರಾಳವಾಗಿ ಮಾತನಾಡುತ್ತಿದ್ದಳು. ಒಥೆಲೋ ಡೆಸ್‌ಡಿಮೋನರು ದಂಪತಿಗಳಾದ ಅನಂತರವೂ ಕ್ಯಾಷಿಯೋವಿನ ರೀತಿಯಲ್ಲಿ ಯಾವ ಮಾರ್ಪಾಡೂ ಉಂಟಾಗಲಿಲ್ಲ. ಇವನು ಅವರ ಮನೆಗೆ ಅಡಿಗಡಿಗೆ ಹೋಗಿ ಬರುತ್ತಿದ್ದನು. ಒಥೆಲೋವು ಸ್ವಭಾವತಃ ಆಲೋಚನಾಶೀಲನು. ಕಡಿದಾದ ಪ್ರಕೃತಿಯವನು. ಇಂತಹವರಿಗೆ ತಮ್ಮ ಮನೋವೃತ್ತಿಯೇ ತಮಗೆ ಕಟುವಾಗಿ ಬೇರೆ ಮನೋವೃತ್ತಿಯುಳ್ಳವರ ಮಾತುಕಥೆಗಳು ಕೆಲವು ವೇಳೆ ಉಲ್ಲಾಸಪ್ರದವಾಗುವುವು.

ಇದರಂತೆಯೇ ಕ್ಯಾಷಿಯೋವಿನ ಮಾತುಕಥೆ ಹರಟೆಗಳು ಒಥೆಲೋವಿಗೆ ಪ್ರಿಯವಾಗಿಯೇ ಇದ್ದುವು. ಒಥೆಲೋವನ್ನು ವಿವಾಹವಾಗೆಂದು ಹೇಳುವುದಕ್ಕೆ ಕ್ಯಾಷಿಯೋವು ಡೆಸ್‌ಡಿವೋನಳ ಮನೆಗೆ ಹೋಗಿಬರುತ್ತಿದ್ದಾಗ ಆಕೆಯೊಡನೆ ಹೇಗೆ ಮಾತಾಡುತ್ತಿದ್ದನೋ ಈಗಲೂ ಹಾಗೇ ಅಷ್ಟು ಧಾರಾಳವಾಗಿಯೇ ಆಕೆಯೊಡನೆ ಮಾತಾಡುತ್ತಿದ್ದನು.

ಕೆಲವು ದಿನಗಳ ಕೆಳಗೆ ಒಥೆಲೋವು ಕ್ಯಾಷಿಯೋವಿಗೆ ಲೆಫ್ಟಿನೆಂಟ್ ಎಂಬ ಮುಂದಿನ ಅಂತಸ್ತಿನ ಅಧಿಕಾರವನ್ನು ಕೊಟ್ಟನು. ಆ ಪದವಿಯು ತನ್ನ ಅಧಿಕಾರಕ್ಕೆ ಎರಡನೆಯದಾಗಿಯೂ ಅಪಾರವಾದ ನಂಬಿಕೆಗೆ ಪಾತ್ರವಾದ ಸ್ಥಾನವಾಗಿಯೂ ಇತ್ತು. ಕ್ಯಾಷಿಯೋವಿಗಿಂತ ಹೆಚ್ಚು ಕಾಲದಿಂದ ಸೈನ್ಯದ ಉದ್ಯೋಗದಲ್ಲಿದ್ದ ಅಯಾಗೊ ಎಂಬವನು ತಾನು ಆ ಪದವಿಯನ್ನು ಪಡೆಯಲು ಕ್ಯಾಷಿಯೋವಿಗಿಂತ ಹೆಚ್ಚಿನ ಅರ್ಹತೆಯುಳ್ಳವನೆಂದು ಭಾವಿಸಿಕೊಂಡಿದ್ದನಾಗಿ, ಕ್ಯಾಷಿಯೋವಿನ ಈ ಅಭ್ಯುದಯವು ಅವನಿಗೆ ಸಂತಾಪಕಾರಕವಾಯಿತು. ಆದ್ದರಿಂದ ಅವನು ಕ್ಯಾಷಿಯೋವನ್ನು ಹೆಂಗಸರ ಗುಂಪಿನಲ್ಲಿರಲು ತಕ್ಕವನೆಂಬುದಾಗಿಯೂ, ಯುದ್ಧವಿದ್ಯೆಯಾಗಲಿ ವ್ಯೂಹರಚನೆಯಾಗಲಿ ಹೆಂಗಸರಿಗೆ ಎಷ್ಟು ಗೊತ್ತೋ ಅವನಿಗೂ ಅಷ್ಟೇ ಗೊತ್ತೆಂಬುದಾಗಿಯೂ, ಜರಿಯತೊಡಗಿದನು. ಹೀಗೆ, ಅಯಾಗೋವಿಗೆ ಕ್ಯಾಷಿಯೋವಿನಲ್ಲಿ ದ್ವೇಷ, ಅವನನ್ನು ಉನ್ನತಪದವಿಗೆ ನಿಯಮಿಸಿದುದಕ್ಕಾಗಿ ಒಥೆಲೋವಿನಲ್ಲಿ ದ್ವೇಷ. ಇದಲ್ಲದೆ ತನ್ನ ಭಾರ್ಯೆಯಾದ ಎಮಿಲಿಯಳಲ್ಲಿ ಒಥೆಲೋವು ಕಣ್ಣಿಟ್ಟಿದ್ದನೆಂಬ ಒಂದು ಬರಿಯ ಸಂಶಯದಿಂದ ಅವನ ಮೇಲೆ ದ್ವೇಷವಿನ್ನೂ ಹೆಚ್ಚಿತು. ಆದ್ದರಿಂದ ಭೇದೋಪಾಯಕುಶಲನಾದ ಅಯಾಗೋವು ಮಾತ್ಸರ್ಯವನ್ನು ತೀರಿಸಿಕೊಳ್ಳಲು, ಕ್ಯಾಷಿಯೋ ಒಥೆಲೋ ಡೆಸ್‌ಡಿವೋನಾ ಈ ಮೂರು ಮಂದಿಯ ಸಾಂಘಾತಿಕನಾಶಕ್ಕೆ ಭಯಂಕರವಾದ ಒಂದು ಹೊಂಚಿಕೆಯನ್ನು ಹವಣಿಸಿದನು.

ಅಯಾಗೋವು ತಂತ್ರಿ, ಮತ್ತು ಮನುಷ್ಯರ ಮನಸ್ಸನ್ನು ಚೆನ್ನಾಗಿ ತಿಳಿದಿದ್ದವನು. ಮನುಷ್ಯನಿಗೆ ಶಾರೀರಕ ವೇದನೆಗಿಂತಲೂ ಮಾನಸಿಕ ವೇದನೆಯೇ ತೀಕ್ಷ್ಣವಾದದ್ದು ; ಅದರಲ್ಲಿಯೂ ಮಾತ್ಸರ್ಯ ಸಂಭೂತವಾದ

ವೇದನೆಯಂತೂ ಅತ್ಯಂತ ಕಠಿಣವಾದದ್ದು ; ಎಂದು ಅವನು ಚೆನ್ನಾಗಿ ಬಲ್ಲನು. ಕ್ಯಾಷಿಯೋವಿನಲ್ಲಿ ಒಥೆಲೋವಿಗೆ ಅನುಮಾನವನ್ನುಂಟುಮಾಡಿದರೆ ತನ್ನ ಸಂಕಲ್ಪವು ನೆರವೇರುವುದೆಂದೂ, ತನ್ನ ಹೊಟ್ಟೆಯುರಿ ತೀರುವುದೆಂದೂ ಯೋಚಿಸಿಕೊಂಡನು. "ಆಗ ಕ್ಯಾಷಿಯೋವಾಗಲಿ, ಒಥೆಲೋವಾಗಲಿ, ಅಥವಾ ಇಬ್ಬರೂ ಆಗಲಿ, ನಾಶವಾಗುವರು. ಆಗಲಿ ! ಆಗಲಿ !" ಎಂದುಕೊಂಡನು.

ಸರ್ವ ಸೇನಾನಾಯಕನಾದ ಒಥೆಲೋವೂ ಅವನ ಹೆಂಡತಿಯೂ ಈ ದ್ವೀಪಕ್ಕೆ ಬಂದದ್ದೂ, ಹಗೆಗಳ ಸೇನಾ ನೌಕವು ಬಿರುಗಾಳಿಯಿಂದ ದೆಸೆಗೆಟ್ಟು ಹೋದದ್ದೂ, ಆ ದ್ವೀಪದವರಿಗೆ ಒಂದು ಬಗೆಯ ಆನಂದೋತ್ಸವವಾಯಿತು. ಪ್ರತಿಯೊಬ್ಬರೂ ಹಬ್ಬ ಮಾಡುವುದರಲ್ಲಿಯೂ ವಿನೋದಗಳಲ್ಲಿಯೂ ಕಾಲಯಾಪನೆಮಾಡುತ್ತಿದ್ದರು. ದ್ರಾಕ್ಷಾರಸವು ಹೊಳೆಯಂತೆ ಹರಿಯತೊಡಗಿತು. "ಸೇನಾ ನಾಯಕನಾದ ಒಥೆಲೋವಿಗೂ ಅವನ ಭಾರ್ಯೆಗೂ ಆಯುರಾರೋಗ್ಯಗಳುಂಟಾಗಲಿ" ಎಂಬ ಘೋಷದೊಡನೆ ಪಾನಪಾತ್ರೆಯು ಒಬ್ಬರ ಕೈಯಿಂದ ಒಬ್ಬರ ಕೈಗೆ ಧಾರಾಳವಾಗಿ ಓಡಾಡುತ್ತಿತ್ತು.

ಆ ದಿನ ರಾತ್ರಿ ಕಾವಲಿನ ಮೇಲ್ವಿಚಾರಣೆಗೆ ಕ್ಯಾಷಿಯೋವು ನಿಯಮಿತನಾಗಿದ್ದನು. "ಪಾನಪ್ರಮತ್ತತೆಯಿಂದ ಕಾದಾಟಗಳು ಹುಟ್ಟಿ ಪ್ರಜೆಗಳು ಭೀತರಾದಾರು, ಸೈನ್ಯದವರ ವಿಚಾರದಲ್ಲಿ ಅಸಹ್ಯಗೊಂಡಾರು, ಆದ್ದರಿಂದ ಸೇನಾನಿಗಳು ಅತಿಪಾನಮಾಡದಂತೆ ನೋಡಿಕೊಳ್ಳಬೇಕು" ಎಂದು ಒಥೆಲೋವು ಕ್ಯಾಷಿಯೋವಿಗೆ ಹೇಳಿದ್ದನು. ಈ ರಾತ್ರಿಯೇ, ಅಯಾಗೋವು ದೀರ್ಘಾಲೋಚನೆಯಿಂದ ಸಿದ್ಧಾಂತಮಾಡಿದ್ದ ತನ್ನ ಕುತಂತ್ರಕ್ಕೆ ಉಪಕ್ರಮಿಸಿದನು. ತನಗೆ ಒಥೆಲೋವಿನಲ್ಲಿರುವ ಸ್ವಾಮಿಭಕ್ತಿ ಪ್ರೀತಿಗಳ ಕಾರಣದಿಂದ ಆತನ ಉತ್ತರೋತ್ತರ ಶ್ರೇಯಸ್ಸನ್ನು ಹಾರೈಸುತ್ತ, ಕ್ಯಾಷಿಯೋವನ್ನು ಪಾನಮಾಡುವಂತೆ ಪ್ರೇರೇಪಿಸಿದನು. ಕಾವಲು ಕಾಯುತ್ತಿರುವ ಯೋಧನು ಮಾದಕ ವಸ್ತುವನ್ನು ಸೇವಿಸುವುದು ಮಹಾಪ್ರಮಾದ.

ಕ್ಯಾಷಿಯೋವು ಕೆಲವು ಕಾಲ ಮನೋದಾರ್ಢ್ಯವುಳ್ಳವನಾಗಿ ಅವನ

ಪ್ರೇರಣೆಗೊಳಗಾಗಲಿಲ್ಲ. ಅಯಾಗೋವು ಸಮಯೋಚಿತವಾದ ಮಾತನಾಡುವುದರಲ್ಲಿ ಬಹು ಚಮತ್ಕಾರಿ. ಗೆಳೆತನದ ಸ್ವಾತಂತ್ರ್ಯವೆಂದು ತೋರಿಬರುವಹಾಗೆ, ಅವನು ಒತ್ತಿಒತ್ತಿ ಹೇಳುತ್ತಿದ್ದ ಮಾತುಗಳಿಗೆ ಕ್ಯಾಷಿಯೋವು ಒಳಗಾದನು. ಬಟ್ಟಲು ಬರಿದಾದ ಹಾಗೆಲ್ಲಾ ಅಯಾಗೋವು ಅದನ್ನು ತುಂಬುತ್ತ ಉದ್ವೇಗವನ್ನುಂಟುಮಾಡುವಂತಹ ಹಾಡುಗಳನ್ನು ಹಾಡುತ್ತ, ಡೆಸ್‌ಡಿಮೋನಳು ಅದ್ವಿತೀಯ ರೂಪವತಿಯೆಂದೂ, ಆಕೆಗೆ ಆಯುರಾರೋಗ್ಯ ಐಶ್ವರ್ಯಗಳು ಉಂಟಾಗಬೇಕೆಂದೂ 'ಹಾರೈಸುತ್ತ ಮಿತಿಮೇರೆಗಳನ್ನು ಮೀರಿ ಪಾನ ಮಾಡಿಸಿ, ಅವನ ವಿವೇಕವನ್ನು ಪರಿಹರಿಸಿದನು. ಹಿಂದೆಯೇ ಅಣಿಯಾಗಿದ್ದಂತೆ, ಒಬ್ಬನು ಕ್ಯಾಷಿಯೋವನ್ನು ಕೆರಳಿಸಿದನು. ಉಭಯರೂ ಶಸ್ತ್ರಪಾಣಿಗಳಾದರು. ಇವರ ದ್ವಂದ್ವಯುದ್ಧವನ್ನು ಅಡಗಿಸಲು ಪ್ರಯತ್ನಿಸಿದ ಒಬ್ಬಗಣ್ಯನಾದ ಸೈನಿಕನು ಈ ಗಲಭೆಯಲ್ಲಿ ಗಾಯಗೊಂಡನು.

ಇಷ್ಟಾಗುವ ವೇಳೆಗೆ ದೊಂಬಿಯು ವಿಸ್ತಾರವಾಯಿತು. ಇಷ್ಟು ಅನರ್ಥಗಳನ್ನು ಹುಟ್ಟಿಹಾಕಿದ ಅಯಾಗೋವು, "ಸೈನಿಕರು ಪಾನಮಾಡಿ ಗಲಭೆಮಾಡಿದರು" ಎಂಬಿಷ್ಟನ್ನು ಪ್ರಕಟಿಸುವುದಕ್ಕೆ ಪ್ರತಿಯಾಗಿ, ದಂಗೆಯೋ ದಾಂಧಲೆಯೋ ದರೋಡೆಯೋ ಏನೋ ನಡೆದಿದೆ ಎಂದು ತೋರುವಹಾಗೆ ಗೋಪುರದ ಮೇಲಿನ ಗಂಟೆಯನ್ನು ಬಾಜಿಸಿ ಪ್ರಮಾದ ಭಯವನ್ನು ಪ್ರಚಾರಮಾಡಿದನು. ಈ ಶಬ್ದವನ್ನು ಕೇಳಿ ಒಥೆಲೋವು ಅವಸರವಸರವಾಗಿ ಬಟ್ಟೆಗಳನ್ನು ಹಾಕಿಕೊಂಡು, ಈ ಗದ್ದಲವು ನಡೆದ ಸ್ಥಳಕ್ಕೆ ಒಂದು, ಕ್ಯಾಷಿಯೋವನ್ನು ಪ್ರಶ್ನೆ ಮಾಡತೊಡಗಿದನು. ಕ್ಯಾಷಿಯೋವು ಈ ವೇಳೆಗೆ ಸ್ಮೃತಿವಂತನಾಗಿದ್ದನು. ಮದ್ಯದ ಮತ್ತು ಕ್ರಮವಾಗಿ ಕಮ್ಮಿಯಾಗುತ್ತಿತ್ತು. ಆದರೂ ಸರ್ವಸೇನಾಪತಿಯ ಪ್ರಶ್ನೆಗಳಿಗೆ ಉತ್ತರ ಕೊಡಲು ಅವನಿಗೆ ಬಲು ನಾಚಿಕೆಯಾಯಿತು. ಅಯಾಗೋವು, ಈ ವಿದ್ಯಮಾನವನ್ನು ಮಹತ್ತರವಾಗಿ ಭಾವಿಸದೆ ಕ್ಯಾಷಿಯೋವನ್ನು ಮನ್ನಿಸಬೇಕೆಂದು ಕೇಳಿಕೊಳ್ಳುವವನಂತೆ ನಟಿಸುತ್ತ, ಒಥೆಲೋವೇ ವಿದ್ಯಮಾನವನ್ನು ಒತ್ತಿಒತ್ತಿ ಕೇಳಿ ತಿಳಿದುಕೊಳ್ಳುವಂತೆ ಮಾಡಿದನು. ಹೀಗೆ ಒಥೆಲೋವಿನಿಂದ ಒತ್ತಾಯವಾದಕಾರಣ ತಿಳಿಸಬೇಕಾಯಿತೋ ಎನ್ನುವವನಂತೆ ನಡೆದುದನ್ನೆಲ್ಲಾ ಹೇಳಿದನು. ಆದರೆ

ತಾನು ಮಾಡಿದ ಕೃತ್ಯವನ್ನು ಮಾತ್ರ ಹೇಳಲಿಲ್ಲ. ಕ್ಯಾಷಿಯೋವಿಗೂ ಆ ವಿಚಾರವು ಜ್ಞಾಪಕಕ್ಕೆ ಬರಲಿಲ್ಲ. ಹೀಗೆ ಈ ತಂತ್ರಿಯು ತನ್ನ ಕೃತ್ಯವನ್ನು ಮರೆಮಾಚಿ, ಕ್ಯಾಷಿಯೋವಿನ ಕೃತ್ಯವನ್ನು ಹೇಳುವಾಗ್ಗೆ ಅವನ ಅಪರಾಧವು ಹಗುರವಾಗಿ ತೋರಬೇಕೆಂದು ಮಾತನಾಡುವವನಂತೆ ನಟಿಸುತ್ತ, ಅವನ ಕೃತ್ಯಗಳು ಮಹತ್ತರವಾದವುಗಳೆಂದು ಸ್ಪಷ್ಟವಾಗುವುದಕ್ಕೆ ಎಷ್ಟುಬೇಕೋ ಅಷ್ಟನ್ನೂ ಮಾಡಿದನು. ಒಥೆಲೋವು ನಿಯಮಪ್ರಿಯ ; ಆದ್ದರಿಂದ ಅವನು ಸ್ವಲ್ಪಕಾಲದ ಹಿಂದೆ ಕ್ಯಾಷಿಯೋವಿಗೆ ಕೊಟ್ಟಿದ್ದ ಸೇನಾನಾಯಕಪದವಿಯನ್ನು ಅವನಿಂದ ತಪ್ಪಿಸಿದನು.

ಅಂತೂ ಹೀಗೆ ಅಯಾಗೋವಿನ ಮೊದಲನೆಯ ಕುತಂತ್ರವು ಫಲಿಸಿತು. ಆದರಿಂದ ಅವನ ಪ್ರತಿದ್ವಂದ್ವಿಯು ಅವಮಾನಿತನಾಗಿ ತನ್ನ ಕೆಲಸವನ್ನು ಕಳೆದುಕೊಂಡನು. ಆದರೆ ಆ ಅರಿಷ್ಟರಾತ್ರಿಯಲ್ಲಿ ಆದ ಅವಾಂತರದಿಂದ ಇನ್ನೂ ಅನಾಹುತವು ನಡೆಯಬೇಕಾಗಿತ್ತು. ಕ್ಯಾಷಿಯೋವಿಗೆ ಕೆಟ್ಟಮೇಲೆ ಬುದ್ಧಿ ಬಂತು. ಆದ್ದರಿಂದ ತನಗೆ ಸ್ನೇಹಿತನಂತೆ ಕಾಣಬರುತ್ತಿದ್ದ ಅಯಾಗೋವಿನಲ್ಲಿ "ಅಯ್ಯೋ! ನಾನು ಪಶುವಿನಂತಾಗಿ ಬಿಟ್ಟೆನಲ್ಲಾ ! ಎಂಥ ಅವಿವೇಕಿಯಾಗಿಹೋದೆ! ನನ್ನ ಪರಿಣಾಮವೆಲ್ಲಾ ಹಾಳಾಯಿತೆ! ಸರ್ವಸೇನಾಪತಿಯನ್ನು ಮತ್ತೆ ನನ್ನ ಸ್ಥಾನವನ್ನು ನನಗೆ ಕೊಡೆಂದು ನಾನು ಪ್ರಾರ್ಥಿಸಿಕೊಳ್ಳುವ ಬಗೆ ಹೇಗೆ? ನನ್ನನ್ನು ಮದ್ಯಪಾಯಿಯೆಂದು ಆತನು ತಿರಸ್ಕರಿಸದೆ ಇರುವನೆ! ಆಹಾ! ನನ್ನ ಜನ್ಮವು ಧಿಕ್ಕಾರಕ್ಕೀಡಾಯಿತು" ಎಂದು ಗೋಳಿಟ್ಟು ಹೇಳಿಕೊಂಡನು.

ಅಯಾಗೋವು "ಕಳೆದುಹೋದುದಕ್ಕಾಗಿ ಚಿಂತಿಸಿ ಫಲವಿಲ್ಲ. ನೀನಾಗಲಿ, ಮತ್ತಾವನಾಗಲಿ, ಅಂತಹ ಉತ್ಸವ ಕಾಲಗಳಲ್ಲಿ ಕುಡಿಯುವುದೇನೂ ಆಶ್ಚರ್ಯವಲ್ಲ. ಅದು ಅಪರಾಧವೂ ಅಲ್ಲ. ಕಳೆದು ಹೋದುದು ಕಳೆದುಹೋಯಿತು. ಚಿಂತಿಸಬೇಡ. ಕೆಟ್ಟದ್ದರಲ್ಲಿ ಮಧ್ಯಸ್ಥವೆನ್ನುವಂತೆ, ತಪ್ಪಾಗಿರುವುದನ್ನು ಸರಿಪಡಿಸಿಕೊಳ್ಳಬೇಕು. ಸರ್ವಸೇನಾಪತಿಯ ಭಾರ್ಯೆಯೇ ಈಗ ನಿಜವಾದ ನಮ್ಮ ಸ್ವಾಮಿಯಾಗಿರುವಳು. ಆಕೆಯು ಒಥೆಲೋವಿನಿಂದ ಏನು ಕೆಲಸಬೇಕಾದರೂ ಮಾಡಿಸಬಲ್ಲಳು. ಈಗ ಆಕೆಯು

ಸಹಾಯವನ್ನು ಪ್ರಾರ್ಥಿಸಿ, ಒಥೆಲೋವು ನಿನ್ನ ವಿಚಾರದಲ್ಲಿ ದಯೆಗೊಳ್ಳು ವಂತೆ ಆಕೆ ಮಧ್ಯಸ್ಥಿಕೆ ಮಾಡಬೇಕೆಂದು ಕೇಳಿಕೊಳ್ಳುವುದು ಸರ್ವೋತ್ತಮ ವಾದ ಕೆಲಸ. ಆಕೆಯು ಸರಳಹೃದಯಳು; ಕಷ್ಟದಲ್ಲಿರುವವರನ್ನು ಕಂಡರೆ ಕನಿಕರಗೊಳ್ಳುವಳು, ಪರಹಿತಪ್ರದವಾದ ಇಂತಹ ಕೆಲಸವನ್ನು ಮಾಡಲು ಸಂತೋಷದಿಂದ ಒಡಂಬಡುವಳು. ಆಕೆಯಿಂದ ನಿನಗೆ ಮತ್ತೆ ಒಥೆಲೋವಿನ ಅನುಗ್ರಹವು ದೊರಕುವುದು. ಈ ಒಡಕು ಮುಚ್ಚಿಹೋಗಿ ಸ್ನೇಹವು ಅಭಿವೃದ್ಧಿಗೊಳ್ಳುವುದು" ಎಂದು ಹೇಳಿದನು.

ಈ ಹಿತಬೋಧನೆಯು ಸರಿಯಾದದ್ದೇ. ಆದರೆ ಅದು ದುರುದ್ದೇಶ ಭರಿತವಾಗಿದ್ದಕಾರಣ ಅನರ್ಥ ಪರಂಪರೆಗೆ ಕಾರಣವಾಯಿತು. ಇದು ಉತ್ತರೋತ್ತರ ನಡೆಯುವ ಕಥೆಯಿಂದ ತಿಳಿಯುವುದು.

ಅಯಾಗೋವಿನ ಹೇಳಿಕೆಯಂತೆ ಕ್ಯಾಷಿಯೋವು ಡೆಸ್‌ಡಿಮೋನಳಲ್ಲಿ ತನ್ನ ಕಷ್ಟವನ್ನು ಕುರಿತು ಮೊರೆಯಿಟ್ಟನು. ಆಕೆಯು ನ್ಯಾಯಪರಳು, ಸುಜನರ ಕಷ್ಟಸ್ಥಿತಿಗಾಗಿ ಮನಮರುಗುವವಳು; ಆದ್ದರಿಂದ ತನ್ನ ಪತಿಯಲ್ಲಿ ಕ್ಯಾಷಿಯೋವಿನ ಮೇಲ್ಮೆಗಾಗಿ ಖಂಡಿತವಾಗಿ ಮಾತನಾಡುವುದಾಗಿಯೂ ಅವನ ಕಾರ್ಯನಿರ್ವಾಹಕ್ಕಾಗಿ ಪ್ರಾಣವನ್ನಾದರೂ ಒಪ್ಪಿಸುವುದಾಗಿಯೂ ಮಾತುಕೊಟ್ಟು, ಆ ಕೂಡಲೆ ತನ್ನ ಪತಿಗೆ ಮೃದುಮಧುರವಾಗಿ ಹೇಳ ತೊಡಗಿದಳು. ಕ್ಯಾಷಿಯೋವಿನ ಅಪರಾಧ ವಿಚಾರದಲ್ಲಿ ಒಥೆಲೋವು ಅತ್ಯಂತ ಅಸಹ್ಯಗೊಂಡಿದ್ದರೂ ಆಕೆಯ ಪ್ರಾರ್ಥನೆಯನ್ನು ನಡೆಸದಿರಲು ಅಸಾಧ್ಯವಾಯಿತು ಕ್ಯಾಷಿಯೋವಿನ ಅಪರಾಧವನ್ನು ಕ್ಷಮಿಸಲು ಇದು ಅಕಾಲವೆಂದೂ, ಸ್ವಲ್ಪ ಕಾಲಯಾಪನೆಮಾಡುವುದು ಆವಶ್ಯಕವೆಂದೂ ಹೇಳಲಾಗಿ, ಆಕೆಯು ಸುಮ್ಮನಾಗದೆ, "ಈದಿನ ರಾತ್ರಿ ಅಥವಾ ಮರುದಿನ ಉದಯ ಅಥವಾ ನಾಡಿದ್ದು ಬೆಳಿಗ್ಗೆ ಅವನು ಕ್ಷಮೆಯನ್ನು ಹೊಂದಬೇಕು. ನಿರ್ಭಾಗ್ಯನಾದ ಕ್ಯಾಷಿಯೋವು ಅಧಿಕಾರವನ್ನು ಕಳೆದುಕೊಂಡುದರಿಂದಲೂ ಅಪಮಾನಿತನಾದುದರಿಂದಲೂ, ದೀನನಾಗಿ ತೊಳಲಿ ಬಳಲುತ್ತಿರುವನು. ಅವನ ಅಪರಾಧಕ್ಕೆ ಈಮಟ್ಟಿನ ಶಿಕ್ಷೆಯು ಬಹು ಕಠಿಣವಾದದು" ಎಂದು ವಾದಿಸಿದಳು. ಇಷ್ಟಾದರೂ ಒಥೆಲೋವು ಮನಸ್ಸು ಕೊಡಲಿಲ್ಲ. ಆಗ

ಆಕೆಯು "ಆಹಾ! ಏನು! ಪ್ರಾಣಕಾಂತನೇ, ನಾನು ಕ್ಯಾಷಿಯೋವಿನ ವಿಚಾರದಲ್ಲಿ ಇಷ್ಟು ವಾದಿಸಬೇಕೆ? ಮಹನೀಯನಾದ ಆತನ ವಿಚಾರ ದಲ್ಲಿಯೇ ಇಷ್ಟು ಬೇಡಿಕೊಂಡು ಹೇಳಬೇಕೆ? ನಾನು ನಿನ್ನನ್ನು ವರಿಸ ಬೇಕೆಂದು ಆತನು ನನ್ನಲ್ಲಿ ಎಷ್ಟು ಪ್ರಾರ್ಥಿಸಿದನು! ನಾನು ನಿನ್ನನ್ನು ಹಳಿದು ಮಾತನಾಡಿದರೆ ಆತನು ಹೇಗೆ ವಾದಿಸುತ್ತಿದ್ದನು! ಇದು ಬಹಳ ಸಣ್ಣವಿಚಾರ. ನನ್ನಲ್ಲಿ ನಿನಗಿರುವ ಪ್ರೀತಿಯು ಎಂತಹುದೆಂದು ಪರೀಕ್ಷಿಸುವ ಸಂದರ್ಭ ಬಂದಲ್ಲಿ ಇದಕ್ಕಿಂತ ಎಷ್ಟೋ ಹೆಚ್ಚಿನ ವಿಚಾರವನ್ನೇ ಕೇಳಿಕೊಳ್ಳು ವೆನು" ಎಂದು ಹೇಳಿದಳು. ಇಷ್ಟು ಪ್ರಾರ್ಥಿಸುವ ತನ್ನ ಕಾಂತೆಯ ಮಾತನ್ನು ಒಥೆಲೋವು ನೆರವೇರಿಸಲಾರೆನೆಂದು ಹೇಳಬಲ್ಲನೆ? ಆದುದರಿಂದ ಆತನು "ಕ್ಯಾಷಿಯೋವನ್ನು ಆ ಅಂತಸ್ತಿಗೇನೋ ತರುವೆನು. ನಿನಗೆ ಈ ವಿಚಾರದಲ್ಲಿ ಮಾತುಕೊಟ್ಟಿದ್ದೇನೆ. ಆದರೆ ಅದಕ್ಕೆ ಸ್ವಲ್ಪಕಾಲ ಬೇಕು" ಎಂದು ಹೇಳಿದನು.

ಹೀಗಿರಲು, ಒಂದು ದಿನ ಕ್ಯಾಷಿಯೋವು ತನ್ನ ಪರವಾಗಿ ಒಥೆ ಲೋವಿಗೆ ಹೇಳಬೇಕೆಂದು ಡೆಸ್‌ಡಿಮೋನಳನ್ನು ಕೇಳಿಕೊಂಡು ಹೊರಡುವ ಹೊತ್ತಿಗೂ, ಅಯಾಗೋ ಒಥೆಲೋ ಇಬ್ಬರೂ ಎದುರು ಬಾಗಿಲಿನಿಂದ ಒಳಗೆ ಬರುವಹೊತ್ತಿಗೂ ಸರಿಹೋಯಿತು. ತಂತ್ರಗಾರನಾದ ಅಯಾಗೋವು ಅವನನ್ನು ನೋಡಿ "ಇದು ನನಗೆ ಸರಿಬೀಳುವುದಿಲ್ಲ" ಎಂದು ತನ್ನಲ್ಲಿ ತಾನೇ ಗೊಣಗುಟ್ಟಿಕೊಂಡನು. ಆ ಕೂಡಲೆ ಡೆಸ್‌ಡಿಮೋನಳೊಡನೆ ಮಾತಿಗೆ ಮೊದಲಾದ್ದರಿಂದ ಅಯಾಗೋವಿನ ಈ ಮಾತಿನ ಮೇಲೆ ಒಥೆ ಲೋವಿಗೆ ಗಮನ ಹೋಗಲಿಲ್ಲ. ಡೆಸ್‌ಡಿಮೋನಳು ಅಲ್ಲಿಂದ ಹೊರಟು ಹೋದಮೇಲೆ ಅಯಾಗೋವು ತನ್ನ ಮನಸ್ಸಿನಲ್ಲಿ ಹುಟ್ಟಿದ ಅನುಮಾನ ಪರಿಹಾರಾರ್ಥವಾಗಿಯೋ ಎಂಬಂತೆ ಒಥೆಲೋವನ್ನು ಕುರಿತು, "ಅಯ್ಯಾ, ನೀನು ಕನ್ಯಾರ್ಥಿಯಾಗಿ ಈ ವನಿತೆಯನ್ನು ಉಪಸರ್ಪಣೆ ಮಾಡುತ್ತಿದ್ದು ದನ್ನು ಕ್ಯಾಷಿಯೋವು ಬಲ್ಲನೇ?" ಎಂದು ಕೇಳಿದನು.

ಒಥೆಲೋವು "ಅಹುದು. ಕ್ಯಾಷಿಯೋವು ಬಲ್ಲನು. ಅಷ್ಟೇ ಅಲ್ಲ, ಆಕೆಯು ನನ್ನನ್ನು ವರಿಸುವಂತೆ ಮಾಡಲು ಆಕೆಯ ಬಳಿಗೆ ಆಗಾಗ್ಗೆ ಹೋಗಿ

ಬರುತ್ತಿದ್ದನು ' ಎಂದು ಹೇಳಿದನು. ಆಗ ಅಯಾಗೋವು ಹುಬ್ಬುಗಂಟಿಕ್ಕಿ ಭಯಂಕರವಾದ ಯಾವುದೋ ಒಂದು ವಿಚಾರವು ಸ್ಪಷ್ಟವಾದಂತೆ "ಸರಿ ಸರಿ!" ಎಂದನು.

ಒಡನೆಯೇ, ಕ್ಯಾಷಿಯೋವನ್ನು ಕಂಡು ಅಯಾಗೋವು ಅಂದು ಕೊಂಡ ಮಾತುಗಳು ಒಥೆಲೋವಿಗೆ ಜ್ಞಾಪಕಕ್ಕೆ ಬಂದುವು. ಆಗ ಅವನು "ಇದಕ್ಕೆಲ್ಲಾ ಏನೋ ಅರ್ಥವಿರುವಂತೆ ತೋರುತ್ತದೆ. ಅಯಾಗೋವು ನ್ಯಾಯಪರ, ಪ್ರೀತಿವಾತ್ಸಲ್ಯಗಳುಳ್ಳ ನಿಸ್ಪೃಹಮನುಷ್ಯ. ಅವನ ಋಜು ಮನಸ್ಸಿನಲ್ಲಿ ನಡೆಯುವ ಘನವಾದ ಆಲೋಚನೆಗಳು ಬಾಯಲ್ಲಿ ಹೇಳಿ ಕೊಳ್ಳುವುದಕ್ಕೆ ಬರದಂಥವುಗಳು, ಅಪ್ರಾಮಾಣಿಕರಾದ ಅಸತ್ಪುರುಷ ರಲ್ಲಾಗಿದ್ದರೆ ಇಂಥ ಮಾತುಗಳು ಕುಹಕವಾಗುತ್ತಿದ್ದುವು. ಆದರೆ ಅಯಾ ಗೋವು ಅಂಥವನಲ್ಲ" ಎಂದು ಭಾವಿಸಿಕೊಳ್ಳುತ್ತ "ಅಯಾಗೋ, ನಿನಗೆ ತಿಳಿದಿರುವುದನ್ನು ದಯವಿಟ್ಟು ಸ್ಪಷ್ಟವಾಗಿ ಹೇಳು. ಎಷ್ಟೇ ನಿಕೃಷ್ಟವಾದ ಸಂಗತಿಗಳಾಗಿದ್ದರೂ ಅವುಗಳನ್ನು ಮುಚ್ಚುಮರೆಯಿಲ್ಲದೆ ಹೇಳಿಬಿಡು" ಎಂದು ಕೇಳಿಕೊಂಡನು.

ಅಯಾಗೋವು "ಕೆಲವು ನಿಕೃಷ್ಟವಾದ ಸಂಗತಿಗಳು ನನ್ನ ಹೃದ ಯವನ್ನು ಪ್ರವೇಶಿಸಿದ್ದ ಮಾತ್ರಕ್ಕೇನಾಯಿತು? ಎಂತಹ ಅರಮನೆಯಾದರೂ ಕಸಬೀಳದೆ ಇರುತ್ತದೆಯೇ?" ಎಂದು ತನ್ನ ಮಾತುಗಳಿಗೆ ಪೀಠಿಕೆ ಹಾಕಿ ಕೊಂಡು, "ಅಯ್ಯಾ, ನಾನು ಎಲ್ಲವನ್ನೂ ಪೂರ್ತಿಯಾಗಿ ಕಣ್ಣಾರ ಕಂಡು ಮಾತನಾಡುತ್ತಿಲ್ಲ; ಆದ್ದರಿಂದ ನನ್ನ ಮಾತನ್ನು ಕೇಳಿ ಅದರಿಂದ ನಿನಗೆ ತೊಂದರೆಯಾದರೆ ಮಹಾ ಅನ್ಯಾಯವಾಗುವುದು. ಅದರಿಂದ ನಿನ್ನ ಮನಸ್ಸಿ ಗೇನೋ ಅಶಾಂತಿಯುಂಟಾಗುವುದು. ಆದರೆ ಕೇವಲ ಅಲ್ಪ ಸಂದೇಹ ಗಳಿಂದ ಜನರ ಕೀರ್ತಿಯೇನೂ ಕಳಂಕಿತವಾಗುವುದಿಲ್ಲ" ಎಂದು ತುಣುಕು ಮಿಣುಕಿನಂತಹ ಕೆಲವು ಮಾತುಗಳನ್ನಾಡಲಾಗಿ ಒಥೆಲೋವಿನ ಮನೋ ವೃತ್ತಿಯು ಕಲಕಿ ಉದ್ವೇಗಗೊಂಡಿತು. ಆಗ ಅವನ ಮನಶ್ಶಾಂತಿಯನ್ನು ಪರಿಪಾಲಿಸುವುದೇ ತನ್ನ ಮುಖ್ಯೋದ್ದೇಶವಾಗಿರುವಂತೆ ತೋರ್ಪಡಿಸಿ ಕೊಳ್ಳುತ್ತ "ಸಂದೇಹಜನ್ಯವಾದ ದುರಾಗ್ರಹದಿಂದ ಮನುಷ್ಯನು ಇಹಪರ

ಗಳಿಗೆ ಭಂಗವನ್ನುಂಟುಮಾಡಿಕೊಳ್ಳುವನು. ಆದುದರಿಂದ ಈ ವಿಚಾರದಲ್ಲಿ ಜಾಗರೂಕನಾಗಿ ನಡೆದುಕೊಳ್ಳಬೇಕು" ಎಂದು ಹೇಳುತ್ತ ಒಥೆಲೋವಿನ ಅಜಾಗರೂಕ ಹೃದಯದಲ್ಲಿ ಈ ನೀಚನು ಸಂದೇಹ ಮೂಡುವಂತೆ ಮಾಡಿದನು. ಆದರೆ ಒಥೆಲೋವು "ನನ್ನ ಹೆಂಡತಿಯು ರೂಪವತಿಯೆಂದೂ, ಸ್ನೇಹಪರಳೆಂದೂ, ಜನಗೋಷ್ಠಿಯಲ್ಲಿಯೂ ಸ್ನೇಹಿತರಲ್ಲಿಯೂ ವಾತ್ಸಲ್ಯವುಳ್ಳವಳೆಂದೂ, ನಿಸ್ಸಂಕೋಚವಾಗಿ ಮಾತನಾಡುವಳೆಂದೂ ಬಲ್ಲೆನು. ಹಾಡು ಹಸೆಗಳನ್ನು ಬಲ್ಲಳು, ನೃತ್ಯಗೀತಗಳನ್ನು ಬಲ್ಲಳು, ಸಜ್ಜನರಿಗೆ ಇವೆಲ್ಲವೂ ಭೂಷಣಗಳೇ ಸರಿ. ಆಕೆಯನ್ನು ದುರ್ಜನೆಯೆಂದು ಭಾವಿಸುವುದಕ್ಕೆ ದೃಢವಾದ ನಿದರ್ಶನಗಳು ಒದಗಬೇಕು" ಎಂದನು. ಹೀಗೆ ಒಥೆಲೋವು ತನ್ನ ಹೆಂಡತಿಯಲ್ಲಿ ಅಪನಂಬಿಕೆಪಡಲು ಹಿಂತೆಗೆಯುತ್ತಿದ್ದದ್ದಕ್ಕಾಗಿ ಅಯಾಗೋವು ಸಂತೋಷಪಟ್ಟವನಂತೆ ನಟಿಸುತ್ತ, "ಆಕೆಯನ್ನು ದುರ್ಗುಣಿಯೆಂದು ಹೇಳಲು ನನಗೂ ಯಾವ ನಿದರ್ಶನವೂ ಇಲ್ಲ. ಆದರೂ ಕ್ಯಾಷಿಯೋವಿನ ಜೊತೆಯಲ್ಲಿ ಇರುವಾಗ್ಗೆ ಆಕೆಯ ರೀತಿಯನ್ನು, ಒಂದು ಕಡೆ ಮಾತ್ಸರ್ಯವಿಲ್ಲದೆಯೂ ಮತ್ತೊಂದು ಕಡೆ ನಂಬಿಕೆ ಇಟ್ಟುಕೊಳ್ಳದೆಯೂ ಜಾಗರೂಕತೆಯಿಂದ ಚೆನ್ನಾಗಿ ಪರೀಕ್ಷಿಸಬೇಕು. ನಮ್ಮ ದೇಶಸ್ಥರಾದ ಇಟಲಿಯ ಹೆಂಗಸರ ರೀತಿಯನ್ನು ನೀನು ತಿಳಿದಿರುವುದಕ್ಕಿಂತ ಚೆನ್ನಾಗಿ ನಾನು ಬಲ್ಲೆನು. ವೆನಿಸ್ಸಿನ ವನಿತೆಯರು ತಮ್ಮ ರೀತಿನೀತಿಗಳನ್ನು ತಮ್ಮ ಪತಿಗಳರಿಯದಂತೆ ಮುಚ್ಚಿಡಬಲ್ಲರಾದರೂ ದೇವರಿಂದ ಮುಚ್ಚಿಡಬಲ್ಲರೆ? ನಿನ್ನ ಭಾರ್ಯೆಯು ತನ್ನ ತಂದೆಗೇ ತಿಳಿಯದಂತೆ ನಿನ್ನನ್ನು ವಿವಾಹವಾದಳು. ಆ ವಿದ್ಯಮಾನಗಳನ್ನು ಎಷ್ಟು ಗೋಪ್ಯವಾಗಿ ನಡೆಸಿದಳು! ಆ ವೃದ್ಧ ಮಹಾಶಯನು ತನ್ನ ಸುತೆಯ ರೀತಿಯನ್ನು ತಿಳಿಯಲಾರದೆ ನಿನ್ನನ್ನು ಮಾಟಗಾರನೆಂದು ಭಾವಿಸಿ, ತನ್ನ ಸುತೆಯನ್ನು ನೀನು ಮರುಳುಮಾಡಿದುದಾಗಿ ದೂರು ಹೇಳಿಕೊಂಡನು" ಎಂದು ಮೊದಲಾದ ಹಲವು ಕುತ್ಸಿತ ಕುಯುಕ್ತಿಗಳಿಂದ ಒಥೆಲೋವಿಗೆ ಸಂದೇಹಗಳಮೇಲೆ ಸಂದೇಹಗಳನ್ನುಂಟುಮಾಡಿದನು. ಅಯಾಗೋವು ಹೇಳಿದ "ತನ್ನ ತಂದೆಯನ್ನು ವಂಚಿಸಿದ ವನಿತೆ" ಎಂಬ ಮಾತು ಒಥೆಲೋವಿನ ಮನಸ್ಸಿಗೆ ಅಂಟಿತು. ಆದ್ದರಿಂದ ಅವನು "ತನ್ನ

ತಂದೆಯನ್ನು ವಂಚಿಸಿದವಳು ತನ್ನ ಪತಿಯನ್ನು ವಂಚಿಸದಿರುವಳೆ?" ಎಂದು ಅಡಿಗಡಿಗೆ ಯೋಚಿಸತೊಡಗಿದನು. ಇದನ್ನು ಕಂಡು ಅಯಾಗೋವು "ನಿನ್ನ ಮನಸ್ಸನ್ನು ಕದಲಿಸಿದ್ದು ತಪ್ಪಾಯಿತು; ಕ್ಷಮಿಸಬೇಕು" ಎಂದು ಒಥೆಲೋ ವನ್ನು ಕೇಳಿಕೊಂಡನು. ಒಥೆಲೋವಿನ ಮನಸ್ಸು ಅಂತರಂಗದಲ್ಲಿ ಕದಡಿ ಹೋಗಿತ್ತಾದರೂ ಅವನು ಹೊರಗೆ ಉದಾಸೀನನಾಗಿ ಕಾಣಿಸಿಕೊಳ್ಳುತ್ತ, "ಅಯಾಗೋ, ಮುಂದೆ ಹೇಳು, ಮುಂದೆ ಹೇಳು" ಎಂದು ಬಲವಂತ ಪಡಿಸಿದನು. ಅಯಾಗೋವು "ಕ್ಯಾಷಿಯೋ ನನಗೆ ಸ್ನೇಹಿತ. ಅವನಿಗೆ ಅರಿಷ್ಟಕಾರಿಯಾದ ಯಾವ ವಿಚಾರವನ್ನು ಹೇಳುವುದೂ ನನಗೆ ಧರ್ಮವಲ್ಲ" ಎಂದು ಅವನ ಹಿತೈಷಿಯಂತೆ ನಟನೆಮಾಡುತ್ತ, ಮಾತುಮಾತಿಗೂ ಹಲವು ತಡವೆ ಕ್ಷಮಾಪಣೆ ಕೇಳಿಕೊಳ್ಳುತ್ತ, "ಅಯ್ಯಾ, ಡೆಸ್‌ಡಿಮೋನಳು ತನ್ನ ದೇಶಸ್ಥರೂ ತನ್ನಂತೆ ಉನ್ನತಕುಲಸ್ಥರೂ ಸಜಾತೀಯರೂ ರೂಪವಂತರೂ ಆದ ಯುವಕರನ್ನು ಳಿದು ಸ್ವಭಾವವಿರುದ್ಧವಾದ ರೀತಿಯಲ್ಲಿ ಒಬ್ಬ ಮೂರ ನನ್ನು ವರಿಸಿರುವುದೇ, ಆಕೆಯು ಸ್ವೇಚ್ಛಾವರ್ತಿನಿಯೆಂದು ತಿಳಿಯುವುದಕ್ಕೆ ನಿದರ್ಶನವಲ್ಲವೆ! ವಿವೇಕವುಂಟಾದಾಗ, ಆಕೆಯು ಬೆಳ್ಳಗೆ ರೂಪವಂತರಾಗಿ ರುವ ತನ್ನ ದೇಶದ ಯುವಕರನ್ನೂ ನಿನ್ನನ್ನೂ ಹೋಲಿಸಿ ನೋಡಿರಬಹುದು. ಈಗ, ನೀನು ಕ್ಯಾಷಿಯೋವಿಗೆ ಅವನ ಅಧಿಕಾರವನ್ನು ಕೊಡಲು ಸಾವಕಾಶ ಮಾಡು. ಆಗ ನಿನ್ನ ಭಾರ್ಯೆಯು ಎಷ್ಟುಮಟ್ಟಿಗೆ ಅವನ ಮೇಲ್ಮೆಗಾಗಿ ನಿನ್ನನ್ನು ಪ್ರಸನ್ನಗೊಳಿಸಲು ಪ್ರಯತ್ನಿಸುವಳು ಎಂಬುದನ್ನು ತಿಳಿಯು ತ್ತೀಯೆ!" ಎಂದು ಹೇಳಿದನು.

ತಂತ್ರಗಾರನಾದ ಈ ನೀಚನು ತನ್ನ ಭೇದೋಪಾಯಗಳಿಂದ, ನಿರ್ದುಷ್ಟಚರಿತೆಯಾದ ಈ ವನಿತೆಯ ಮನೋಜ್ಞಗುಣಗಳನ್ನೇ ಅವಳ ಸರ್ವನಾಶಕ್ಕೆ ಹೇತುವಾಗುವಂತೆ ಮಾಡಿದನು. ಮೊದಲು, ಕ್ಯಾಷಿಯೋವಿಗೆ ತನ್ನ ಕಷ್ಟವನ್ನು ನೀಗಿಸುವಂತೆ ಆಕೆಯಲ್ಲಿ ಹೇಳಿಕೊಳ್ಳೆಂದು ಉಪದೇಶ ಮಾಡಿದನು. ಆಕೆಯು ಅವನ ಮೇಲ್ಮೆಗಾಗಿ ಪತಿಯಲ್ಲಿ ಹೇಳುವ ಮಾತನ್ನೇ ಆಕೆಯ ನಾಶಕ್ಕೆ ಕಾರಣವಾಗುವಂತೆ ಮಾಡಿದನು. ಅಂತೂ ಆಕೆಯ ಒಳ್ಳೆಯತನವನ್ನೇ ಒಂದು ಬಲೆಯಂತೆ ಮಾಡಿ ಆಕೆಯನ್ನು ಅದರಲ್ಲಿ ಸಿಕ್ಕಿಸಿ

ಬಿಟ್ಟನು. ಅಯಾಗೋವು ಮತ್ತೆ ಒಥೆಲೋವನ್ನು ಕುರಿತು, "ಅಯ್ಯಾ, ಸಾಕಾದಷ್ಟು ನಿದರ್ಶನಗಳು ದೊರಕುವವರೆಗೆ ದಯವಿಟ್ಟು ನಿನ್ನ ಭಾರ್ಯೆಯನ್ನು ನಿರ್ದುಷ್ಟಚರಿತೆಯೆಂದು ತಿಳಿದಿರಬೇಕು" ಎಂದನು.

ಒಥೆಲೋವು "ಆಗಲಯ್ಯ, ನಾನು ತಾಳ್ಮೆಯಿಂದಿರುತ್ತೇನೆ" ಎಂದನು. ಆ ದಿನದ ಮಾತು ಕಥೆಗಳು ಅಂದಿಗೆ ಮುಗಿದುವು. ಆದರೂ ವಂಚಿತನಾದ ಆ ಮೂರನಿಗೆ ಅದು ಮೊದಲು ಕ್ಷಣಕಾಲವಾದರೂ ಮನಶ್ಶಾಂತಿಯು ಇಲ್ಲವಾಯಿತು. ಹಿಂದಿನ ರಾತ್ರಿ ಅವನು ಅನುಭವಿಸಿದ ಸುಖನಿದ್ರೆಯು ಈ ರಾತ್ರಿಯಿಂದ ದೂರವಾಯಿತು. ನಿದ್ರೆಯನ್ನು ಉಂಟುಮಾಡುವ ಯಾವ ಮದ್ದು ಮೂಲಿಕೆಗಳೂ ಫಲಕಾರಿಯಾಗಲಿಲ್ಲ. ಜಾಯಿಕಾಯಿ, ಗಸಗಸೆ, ಅಫೀಮು ಮೊದಲಾದ ಯಾವ ಮಾದಕ ಪದಾರ್ಥವೂ ಇವನಿಗೆ ನಿದ್ರೆಯನ್ನುಂಟುಮಾಡಲಾರದಾದುವು. ಶಸ್ತ್ರಾಸ್ತ್ರಗಳಲ್ಲಿ ಬೇಸರವುಂಟಾಯಿತು. ಸೈನ್ಯದ ಧ್ವಜಪಟವಾಗಲಿ ವ್ಯೂಹವಾಗಲಿ ದೃಷ್ಟಿಗೋಚರವಾದ ಮಾತ್ರದಿಂದಲೇ, ರಣಭೇರಿಯ ಧ್ವನಿಯಾಗಲಿ ರಣವಾದ್ಯದ ಶಬ್ದವಾಗಲಿ ಕುದುರೆಯ ಹೇಷಾರವವಾಗಲಿ ಕಿವಿಗೆ ಬಿದ್ದ ಮಾತ್ರದಿಂದಲೇ, ಉತ್ಸಾಹಿತನಾಗುತ್ತಿದ್ದ ಒಥೆಲೋವಿಗೆ ಈಗ ಇವೆಲ್ಲವೂ ಕರ್ಣಕರ್ಕಶವಾದುವು. ಒಮ್ಮೆ ಸಂತೋಷಪ್ರದವಾಗಿದ್ದ ವ್ಯೂಹರಚನೆ ಮೊದಲಾದ ಯುದ್ಧಕಾರ್ಯಗಳು ಈಗ ಅವನಿಗೆ ಅತ್ಯಂತ ಅಸಹ್ಯವಾಗಿ ಪರಿಣಮಿಸಿದುವು. ಶಾಂತಿಯನ್ನು ಕಳೆದುಕೊಂಡು, ಇಂತಹ ಮನಸ್ಥಿತಿಯುಳ್ಳವನಾಗಿ, ಒಮ್ಮೆ ತನ್ನ ಹೆಂಡತಿಯು ಸಾಧುವೃತ್ತಳೆಂದುಕೊಳ್ಳುವನು. ಒಮ್ಮೆ ಕ್ಯಾಷಿಯೋವಿನಲ್ಲಿ ತನ್ನ ಹೆಂಡತಿಯು ಪ್ರೀತಿಯುಳ್ಳವಳೆಂಬುದನ್ನು ತಾನು ತಿಳಿಯದೆಯೇ ಇದ್ದ ಭಾಗದಲ್ಲಿ ತನಗೆ ಕೊರತೆ ಇರುತ್ತಿರಲಿಲ್ಲವೆಂದುಕೊಳ್ಳುವನು. ಅಂತೂ ಇಂತಹ ಆಲೋಚನೆಗಳಿಂದ ಅವನ ಹೃದಯವು ಶತಶಃ ಛಿನ್ನವಾಯಿತು. ಹೀಗಿರಲು ಒಂದು ದಿವಸ ಅವನು ಅಯಾಗೋವಿನ ಕುತ್ತಿಗೆಯನ್ನು ಹಿಡಿದುಕೊಂಡು "ಡೆಸ್‌ಡಿಮೋನಳ ದುಷ್ಟತನಕ್ಕೆ ನೀನು ನಿದರ್ಶನಗಳನ್ನು ಕೊಡಬೇಕು. ಇಲ್ಲವೇ ಅವಳನ್ನು ದುಷ್ಟಳೆಂದದ್ದಕ್ಕಾಗಿ ಸಾಯಬೇಕು" ಎಂದು ಹೇಳಿದನು. ತನ್ನ ಪ್ರಾಮಾಣಿ

ಕತೆಯನ್ನು ನೀಚತನವೆಂದು ಒಥೆಲೋವು ತಿಳಿದುಕೊಂಡನಲ್ಲಾ ಎಂದು ಖಿನ್ನನಾದಂತೆ ಕಾಣಿಸಿಕೊಳ್ಳುತ್ತ, ಅಯಾಗೋವು "ಅಯ್ಯಾ, ನಿನ್ನ ಭಾರ್ಯೆಯಲ್ಲಿ ಮಲ್ಲಿಗೆ ಹೂವಿನಂತೆ ಕಸೂತಿ ಕೆಲಸಮಾಡಿದ್ದ ಒಂದು ಕರವಸ್ತ್ರವಿದ್ದುದನ್ನು ನೀನು ನೋಡಿದ್ದೆಯಾ?" ಎಂದು ಕೇಳಿದನು.

ಒಥೆಲೊ.—"ದಿಟ. ನಾನೇ ಅದನ್ನು ಅವಳಿಗೆ ಕೊಟ್ಟಿದ್ದೆನು."

ಅಯಾಗೊ.—"ಅದೇ ವಸ್ತ್ರವೇ ಈಗ ಕ್ಯಾಷಿಯೋವಿನಲ್ಲಿದೆ. ಅವನು ಅದರಿಂದ ಇವೊತ್ತು ಮುಖವನ್ನು ಒರೆಸಿಕೊಳ್ಳುತ್ತಿದ್ದುದನ್ನು ನಾನು ಕಂಡೆನು".

ಒಥೆಲೊ —"ನೀನು ಹೇಳುವುದು ದಿಟವಾದರೆ, ಅವರಿಬ್ಬರನ್ನೂ ಧ್ವಂಸಮಾಡಿದಲ್ಲದೆ ನನಗೆ ಮನಶ್ಶಾಂತಿಯಾಗುವುದಿಲ್ಲ. ನಿನಗೆ ನನ್ನಲ್ಲಿರುವ ಸ್ವಾಮಿಭಕ್ತಿಗೆ ನಿದರ್ಶನವಾಗಿ ಇಂದಿನಿಂದ ಮೂರು ದಿನಗಳಲ್ಲಿ ನೀನು ಕ್ಯಾಷಿಯೋವನ್ನು ಸಂಹರಿಸಬೇಕು. ಆ ಸುಂದರಿಯಾದ ರಕ್ಕಸಿಯನ್ನು ಸಂಹರಿಸುವುದಕ್ಕ ನಾನೇ ಏನಾದರೂ ಹೊಂಚಿಕೆಯನ್ನು ಹುಡುಕುವೆನು. ಇದೋ! ಹೊರಟೆನು" ಎಂದು ಹೊರಟುಹೋದನು.

ಸಂದೇಹಜನ್ಯವಾದ ದುರಾಗ್ರಹವುಳ್ಳವರಿಗೆ ಗಾಳಿಯಷ್ಟು ಹಗುರವಾದ ಅತ್ಯಲ್ಪವಿಚಾರಗಳೂ ಸಹ, ವೇದವಾಕ್ಯಗಳಂತೆ ಪರಮ ಪ್ರಮಾಣಗಳಾಗಿ ತೋರುವುವು ಕ್ಯಾಷಿಯೋವಿನ ಕೈಯಲ್ಲಿ ಕಂಡ ತನ್ನ ಭಾರ್ಯೆಯ ಕರವಸ್ತ್ರವು ಒಥೆಲೋವಿಗೆ ಅವರಿಬ್ಬರನ್ನೂ ಕೊಲ್ಲುವುದಕ್ಕೆ ಸಾಕಾದಷ್ಟು ಕಾರಣವಾಯಿತು. ಅದು ಕ್ಯಾಷಿಯೋವಿಗೆ ಹೇಗೆ ಬಂತೆಂದು ಸಹ ಒಥೆಲೋವು ವಿಚಾರಮಾಡಲಿಲ್ಲ. ಇದನ್ನು ಅವಳು ಕ್ಯಾಷಿಯೋವಿಗೆ ಎಂದೂ ಕೊಡಲಾರದವಳು. ಪತಿವ್ರತೆಯಾದ ಆ ವನಿತೆಯು, ತನ್ನ ವಲ್ಲಭನು ತನಗೆ ಪ್ರೀತಿಪೂರ್ವಕವಾಗಿ ಕೊಟ್ಟ ವಸ್ತುವನ್ನು ಪರಪುರುಷನಿಗೆ ಕೊಟ್ಟು ತನ್ನ ಪತಿಯಲ್ಲಿ ಅಪರಾಧಿನಿಯಾಗುವಳೇ! ಇಲ್ಲ. ಕ್ಯಾಷಿಯೋವಿಗಾಗಲಿ ಡೆಸ್‌ಡಿಮೋನಳಿಗಾಗಲಿ ಈ ವಿಚಾರವೇ ತಿಳಿಯದು. ಅದೆಲ್ಲಾ ಅಯಾಗೋವಿನ ತಂತ್ರ. ಏನಾದರೂ ಕುತಂತ್ರಗಳನ್ನು ಚಿಂತಿಸದಿದ್ದರೆ ಅವನಿಗೆ ಕಣ್ಣಿಗೆ ನಿದ್ರೆ ಹತ್ತುತ್ತಿರಲಿಲ್ಲ. ಅವನು ತನ್ನ ಹೆಂಡತಿಯ ಮೂಲಕ ಆ

ವಸ್ತ್ರವನ್ನು ತರಿಸಿದನು. ಆ ಮಾದರಿಯನ್ನು ನೋಡಿಕೊಂಡು ಬೇರೆ ಚೌಕದಲ್ಲಿ ಚಿತ್ರ ಕೆಲಸಮಾಡಿಸುವುದಕ್ಕೆ ಅದು ಬೇಕಾಗಿತ್ತೆಂದು ಅವಳ ಕೈಯಲ್ಲಿ ಹೇಳಿದನು. ಆಕೆಯು ಒಳ್ಳೆಯ ಹೆಂಗಸು; ಗಂಡನಿಗೆ ವಿರುದ್ಧ ವಾಗಿ ನಡೆಯುವ ಗಟ್ಟಿಗಿತ್ತಿಯಲ್ಲ, ಆದ್ದರಿಂದ ತನ್ನ ಗಂಡನ ಮಾತು ನಿಜ ವೆಂದು ನಂಬಿಕೊಂಡು ಆ ವಸ್ತ್ರವನ್ನು ತಂದುಕೊಟ್ಟಳು. ಅದನ್ನು ಅಯಾ ಗೋವು ತೆಗೆದುಕೊಂಡು ಹೋಗಿ ಕ್ಯಾಷಿಯೋವಿನ ಕೈಗೆ ಸಿಕ್ಕುವಂತೆ ಹಾಕಿದ್ದನು. ಅದನ್ನು ಅವನು ತೆಗೆದು ಇಟ್ಟುಕೊಂಡಾಗ, ಡೆಸ್‌ಡಿಮೋ ನಳೇ ಅವನಿಗೆ ಕೊಟ್ಟಿದ್ದಳು ಎಂದು ಹೇಳ ತೊಡಗಿದನು.

ಒಥೆಲೋವು ತನ್ನ ಹೆಂಡತಿಯನ್ನು ಕಾಣುತ್ತಲೇ, ತನಗೆ ತಲೆ ನೋವೆಂದೂ, ತಲೆಗೆ ಕಟ್ಟಿಕೊಳ್ಳಲು ವಸ್ತ್ರ ಬೇಕೆಂದೂ ಕೇಳಿದನು. ಆಕೆಯು ಯಾವುದೋ ಒಂದನ್ನು ತಂದುಕೊಡಲು, ಅವನು "ಇದಲ್ಲ. ನಾನು ನಿನಗೆ ಕೊಟ್ಟಿದ್ದ ಆ ವಸ್ತ್ರ ಬೇಕು" ಎಂದನು. ಈಗ ಆ ವಸ್ತ್ರವು ಡೆಸ್‌ಡಿಮೋನಳ ವಶದಲ್ಲಿರಲಿಲ್ಲ. (ಅದರ ವಿಚಾರವನ್ನು ಹಿಂದೆಯೇ ಹೇಳಿದೆ.) ಅದನ್ನು ತಿಳಿದು ಒಥೆಲೋವು "ಹಾಗಿದ್ದರೆ ಇದು ನಿಜವಾದ ಅಪರಾಧವೇ ಸರಿ. ಆ ವಸ್ತ್ರವು ನಮ್ಮ ತಾಯಿಗೆ ಈಜಿಪ್ಟ್ ದೇಶದ ಒಬ್ಬ ಮಂತ್ರವಾದಿನಿಯಿಂದ ಬಂದದ್ದು. ಆ ಮಂತ್ರವಾದಿನಿಯು ಮನುಷ್ಯರ ಮನಸ್ಸಿನಲ್ಲಿರುವುದನ್ನು ತಿಳಿದು ಹೇಳಿಬಿಡುತ್ತಿದ್ದಳು. ಅವಳು ನಮ್ಮ ತಾಯಿಗೆ 'ಈ ವಸ್ತ್ರವು ನಿನ್ನಲ್ಲಿರಲು, ನಿನ್ನ ಪತಿಯ ಪ್ರೀತಿಗೆ ಪಾತ್ರಳಾಗಿದ್ದು ಸುಖವಾಗಿ ಇರುತ್ತೀಯೆ. ಇದನ್ನು ಕಳೆದುಕೊಂಡರೆ, ನಿನ್ನ ಪತಿಯ ಪ್ರೀತಿಯು ನಿನಗೆ ವಿಮುಖವಾಗುವುದು. ಅಷ್ಟೇ ಅಲ್ಲ. ಪತಿಗೆ ಎಷ್ಟು ಪ್ರೀತಿಪಾತ್ರಳಾಗಿದ್ದೆಯೋ, ಅಷ್ಟು ಆಗ್ರಹಕ್ಕೆ ಪಾತ್ರಳಾಗುವೆ!' ಎಂದು ಹೇಳಿದ್ದಳು. ನಮ್ಮ ತಾಯಿ ಸಾಯುವಾಗ್ಗೆ ಅದನ್ನು ನನಗೆ ಕೊಟ್ಟು, 'ಮಗು' ನೀನು ಮದುವೆಯಾದರೆ, ಈ ವಸ್ತ್ರವನ್ನು ನಿನ್ನ ಹೆಂಡತಿಗೆ ಕೊಡು!' ಎಂದು ಹೇಳಿದ್ದಳು. ನಾನು ಅದರಂತೆ ಮಾಡಿದೆನು. ಎಚ್ಚರಿಕೆ! ಅದನ್ನು ನಿನ್ನ ಕಣ್ಣಿನಂತೆ ಭಾವಿಸಬೇಕು. ಅದು ಅಷ್ಟು ಶ್ರೇಷ್ಠವಾದ ವಸ್ತು" ಎಂದನು.

ಡೆಸ್‍ಡಿಮೋನಳು "ಇದು ಸಾಧ್ಯವೆ!"—ಭಯದಿಂದ ಗದ್ಗದ ಸ್ವರಳಾಗಿ, ಮತ್ತೆ—"ಇದು ಸಾಧ್ಯವೇ!" ಎಂದಳು.

ಒಥೆಲೋವು "ಆ ವಸ್ತ್ರವು ಮಂತ್ರಶಕ್ತಿಯುಳ್ಳದ್ದು. ಅದನ್ನು ಎರಡು ಶತಮಾನ ಕಾಲ ಬದುಕಿದ್ದ ಮಂತ್ರವಾದಿನಿಯು ಭವಿಷ್ಯ ಸಾಕ್ಷಾತ್ಕಾರದ ಆವೇಶದಲ್ಲಿ ಮಾಡಿದಳು. ಆ ವಸ್ತ್ರಕ್ಕೆ ರೇಷ್ಮೆಯನ್ನು ಒದಗಿಸಿದ ಹುಳುಗಳು ಮಹಾ ಪವಿತ್ರವಾದ ದೇಹವುಳ್ಳವುಗಳು. ಅದನ್ನು ಕನ್ಯೆಯ ಹೃದಯದಲ್ಲಿ ಅದ್ದಿ ಬಣ್ಣ ಹಾಕಿತ್ತು" ಎಂದನು.

ಡೆಸ್‍ಡಿಮೋನಳು ಆ ಕರವಸ್ತ್ರದ ಅತ್ಯದ್ಭುತ ಮಹಿಮೆಯನ್ನು ಕೇಳಿ ಅದು ಎಲ್ಲಿಯೋ ಹೋದುದರಿಂದ, ಅದರ ಜತೆಯಲ್ಲಿಯೇ ಪತಿಯ ಪ್ರೇಮವೂ ಹೋಗಿಬಿಡುವುದೆಂದು ಹೆದರಿದಳು. ಪ್ರಾಣವೇ ಹಾರಿಹೋಗುವಂತಾಯಿತು. ಒಥೆಲೋವು ಉದ್ವೇಗಚಿತ್ತನಾಗಿ ಏನೋ ಪ್ರಮಾದ ಮಾಡಿಬಿಡುವನಂತೆ ಎದ್ದನು, ನಿಂತು ನೋಡಿದನು. "ಆ ವಸ್ತ್ರ! ಆ ವಸ್ತ್ರ!!" ಎಂದು ಕೂಗುತ್ತಲೇ ಇದ್ದನು. ಆದರೆ ಆ ವಸ್ತ್ರವೆಲ್ಲಿ ಬರಬೇಕು? ಆದ್ದರಿಂದ ಡೆಸ್‍ಡಿಮೋನಳು ಅವನ ಮನಸ್ಸನ್ನು ಈ ಕಠಿಣ ವಿಚಾರದಿಂದ ತಿರುಗಿಸಬೇಕೆಂದು ಯೋಚಿಸಿ, ಮೃದು ಮೃದುವಾಗಿ ನಗುತ್ತ, "ನಾನು ಕ್ಯಾಷಿಯೋವಿನ ವಿಚಾರವನ್ನು ಪ್ರಸ್ತಾಪ ಮಾಡದಿರಲೆಂದು ಕರವಸ್ತ್ರದ ವಿಚಾರವಾಗಿ ನೀವು ಇಷ್ಟು ಹೇಳುತ್ತಿರುವಿರಲ್ಲವೆ!" ಎಂದು ಕ್ಯಾಷಿಯೋವಿನ ಗುಣಕಥನಕ್ಕೆ ಮೊದಲುಮಾಡಿದಳು. ಅಯಾಗೋವು ಮೊದಲೇ ಈ ವಿಚಾರವನ್ನು ಹೇಳಿದ್ದನು. ಆದ್ದರಿಂದ ಒಥೆಲೋವಿನ ಬುದ್ಧಿಯು ಸಂಪೂರ್ಣವಾಗಿ ಹದ್ದುತಪ್ಪಿದಂತಾಗಿ, ಅವನು ತಟ್ಟನೆದ್ದು ಆ ಕೊಠಡಿಯಿಂದ ಹೊರಟುಹೋದನು. ಅನಂತರ ಡೆಸ್‍ಡಿಮೋನಳು ತನ್ನಲ್ಲಿಯೇ ತಾನು "ನನ್ನ ಪತಿಯು ನನ್ನಲ್ಲಿ ಸಂಶಯವುಳ್ಳವನಾದನೆ?" ಎಂದು ದುಃಖಿತೆಯಾದಳು. ಆತನ ಆ ಸ್ಥಿತಿಗೆ ಕಾರಣವೇನೆಂದೂ ತಾನೇನು ಮಾಡಬೇಕೆಂದೂ ಆಕೆಗೆ ತಿಳಿಯದು. ಪುನಃ "ನನ್ನ ಪತಿಯು ಘನವಂತನು. ಆತನ ರೀತಿಯನ್ನು ಕುರಿತು ಸಂದೇಹಗೊಳ್ಳುವುದು ಅಪಚಾರವೇ ಸರಿ ಆಹಾ! ಎಂತಹ ಅಪರಾಧಿನಿಯಾಗುತ್ತಿದ್ದೆನು!" ಎಂದು

ತನ್ನನ್ನೇ ತಾನು ನಿಂದಿಸಿಕೊಳ್ಳುತ್ತ "ವೆನಿಸ್ಸಿನಿಂದ ಅಪ್ರಿಯವಾರ್ತೆಯೇನಾದರೂ ಬಂದಿರಬಹುದೇ ? ಅಥವಾ ರಾಜಕಾರ್ಯದಲ್ಲಿ ಏನಾದರೂ ತೊಡಕುಗಳಿರಬಹುದೆ? ಇವುಗಳಲ್ಲಿ ಯಾವುದೋ ಆತನ ಉಲ್ಲಾಸಮಯವಾದ ಚಿತ್ತವೃತ್ತಿಯನ್ನು ಮಾರ್ಪಡಿಸಿರುವುದು. ಮನುಷ್ಯರೇನು ದೇವತೆಗಳಲ್ಲ ! ವಿವಾಹದ ದಿನ ಅವರಲ್ಲಿ ತೋರಿಬರುವ ಮನೋಹರವಾದ ಭಾವಗಳೆಲ್ಲವೂ ನಿರಂತರವೂ ಕಾಣುತ್ತಿರಬೇಕೆಂದು ನಿರೀಕ್ಷಿಸುವುದು ಉಚಿತವಲ್ಲ" ಎಂದು ಹೇಳಿಕೊಳ್ಳುತ್ತ, "ಆಹಾ! ಆತನ ನಿರ್ದಯೆಯನ್ನು ಕುರಿತು ನಾನು ಇಷ್ಟು ಕಠಿಣವಾಗಿ ಯೋಚಿಸಬಹುದೇ ?" ಎಂದು ಮತ್ತೆ ತನ್ನನ್ನೇ ತಾನು ನಿಂದಿಸಿಕೊಂಡಳು.

ಮತ್ತೆ ಅವರು ಸೇರಿದಾಗ, ಒಥೆಲೋವು ತನ್ನ ಹೆಂಡತಿಯನ್ನು ಕುರಿತು "ನೀನು ಪರಪುರುಷನಲ್ಲಿ ಆಸಕ್ತೆಯಾಗಿರುವೆ" ಎಂದು ಸ್ಪಷ್ಟವಾಗಿಯೇ ಮಾತನಾಡಿದನು, ಆದರೆ ಆ ಪುರುಷನ ಹೆಸರನ್ನು ಹೇಳಲಿಲ್ಲ. ಅನಂತರ ಒಥೆಲೋವು ತಡೆಯಲಾರದೆ ಬಿಕ್ಕಿಬಿಕ್ಕಿ ಅಳುವುದಕ್ಕೆ ಮೊದಲು ಮಾಡಿದನು.

ಡೆಸ್‌ಡಿಮೋನಳು "ಅಯ್ಯೋ! ಇದೇನು ದುರ್ದಿನ! ನೀವೇಕೆ ಅಳುತ್ತೀರಿ?" ಎಂದು ಕೇಳಿದಳು.

ಒಥೆಲೋವು "ಅಯ್ಯೋ! ಪ್ರಪಂಚದಲ್ಲಿ ಯಾವ ಯಾವ ಬಗೆಯ ಕಷ್ಟಗಳನ್ನಾದರೂ ಸುಲಭವಾಗಿ ತಾಳಿಕೊಳ್ಳಬಹುದಾಗಿತ್ತು. ದಾರಿದ್ರ್ಯ, ರೋಗ, ಅಪಮಾನ ಯಾವುದಾದರೂ ತಡೆದುಕೊಳ್ಳಬಲ್ಲೆನು. ಅಯ್ಯೋ ! ನಿನ್ನ ಅಸತೀತ್ವವು ನನ್ನ ಹೃದಯವನ್ನು ಸೀಳಿಬಿಟ್ಟಿದೆ. ನೀನು ಒಂದು ಕಳೆಯ ಕಾಡುಗಿಡ. ನೋಡುವುದಕ್ಕೆ ಚೆನ್ನ ; ಆದರೆ ಉಂಟುಮಾಡುವುದು ಪ್ರಾಣಸಂಕಟ. ಅಯ್ಯೋ! ನೀನು ಜನ್ಮವೆತ್ತದೆಯೇ ಇರಬಾರದಾಗಿತ್ತೆ ?" ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟು ಹೋದನು. ಆಮೇಲೆ ಆಕೆಯು ತನ್ನ ಕಾಂತನಿಗೆ ತನ್ನಲ್ಲುಂಟಾದ ನಿರಾಧಾರವಾದ ಸಂದೇಹಕ್ಕಾಗಿ ವ್ಯಥೆಪಟ್ಟಳು ; ಭ್ರಾಂತಳಾದಳು ; ನಿದ್ರಾಭಾರದಂತೆ ಬುದ್ಧಿಯು ಭಾರಯಿಸಿತು. ಆದ್ದರಿಂದ ದಾಸಿಯರನ್ನು ಕರೆದು, ತನ್ನ ವಿವಾಹದ ದಿನ ಉಪಯೋಗಿಸಿದ ಬಟ್ಟೆಯನ್ನು

ಹಾಸಿಗೆಯ ಮೇಲೆ ಹಾಸುವಂತೆ ಹೇಳಿದಳು. " ಜನರು ತಮ್ಮ ಮಕ್ಕಳನ್ನು ತಿದ್ದುವಾಗ್ಗೆ ಮೃದುವಾದ ರೀತಿಯಲ್ಲಿ ಶಿಕ್ಷಿಸುವರು. ಒಥೆಲೋವು ನನ್ನನ್ನೂ ಆರೀತಿ ಶಿಕ್ಷಿಸುವನು" ಎಂದು ಅಂದುಕೊಂಡಳು. (ನಿಜವಾಗಿಯೂ ಆಕೆಯು ಹಸುಮಗುವಿನಂತೆಯೇ ಇದ್ದಳು.) ಆ ಪತಿವ್ರತಾಶಿರೋಮಣಿಯು ತನ್ನ ಪತಿಯ ವಿಚಾರದಲ್ಲಿ ಆಕ್ಷೇಪಣೀಯವಾಗಿ ಅಂದುಕೊಂಡದ್ದು ಇಷ್ಟು ಮಾತ್ರವೇ! ಅಂದಿನರಾತ್ರಿ ಆಕೆಯು ಮಲಗಿದಳು. ಪತಿಯು ನಿದಾನವಾಗಿ ಬರುವನೆಂಬುದು ಅವಳ ನಿರೀಕ್ಷಣೆ. ಆಯಾಸದಿಂದ ಜಾಗ್ರತೆಯಲ್ಲಿಯೇ ತೂಕಡಿಕೆಯುಂಟಾಯಿತು. ಒಥೆಲೋವೂ ಸ್ವಲ್ಪ ಹೊತ್ತಿನ ಮೇಲೆ ಶಯನ ಗೃಹಕ್ಕೆ ಬಂದನು. ಅಂದು ತನ್ನ ಭಾರ್ಯೆಯನ್ನು ಕೊಲ್ಲಬೇಕೆಂಬ ಯೋಚನೆಯು ಅವನಿಗೆ ಬಲವತ್ತರವಾಗಿತ್ತು. ಆದರೆ ಮಲಗಿ ನಿದ್ರೆಹೋಗು ತ್ತಿದ್ದ ಅವಳನ್ನು ನೋಡಿದಾಗ ಅಮೃತಶಿಲೆಗಿಂತ ಶುಭ್ರವಾದ ಅವಳ ಶರೀರವನ್ನು ರಕ್ತಮಯವಾಗಿ ಮಾಡುವುದು ಹೇಗೆ, ಅದರಲ್ಲಿ ಒಂದು ಸಣ್ಣ ಕಲೆಯನ್ನು ತಾನೇ ಮಾಡುವುದು ಹೇಗೆ ಎನ್ನಿಸಿತು. ಆದರೆ ಅವಳು ಸಾಯಲೇಬೇಕೆಂದು ಅವನು ನಿರ್ಧರಿಸಿ ಬಿಟ್ಟಿದ್ದನು. ಇಲ್ಲದಿದ್ದರೆ, ಅವಳು ಬದುಕಿದ್ದು ತನಗೆ ಮೋಸಮಾಡಿದಂತೆ ಇತರ ಎಷ್ಟೋ ಜನರನ್ನು ಮೋಸ ಮಾಡುವಳೆಂದುಕೊಂಡನು, ಅನಂತರ ಒಂದುಸಾರಿ, ಕಡೆಯಸಾರಿ, ಚುಂಬನಮಾಡುತ್ತೇನೆಂದುಕೊಂಡು ಮುದ್ದಿಟ್ಟನು. ಅದು ಎಷ್ಟು ಮಧುರ ವಾಗಿತ್ತೆಂದರೆ, ಬಿಡಲಾರದೆ ಮತ್ತೊಂದು ಸಾರಿ ಮುದ್ದಿಟ್ಟುಕೊಂಡನು. ಆಮೇಲೆ ದಳದಳನೆ ಕಣ್ಣಿನಲ್ಲಿ ನೀರು ಸುರಿಯಿತು ; ಆದರೆ " ಇದು ಕ್ರೂರನ ಕಣ್ಣೀರು !" ಎಂದುಕೊಂಡನು.

ಈ ಚುಂಬನಗಳಿಂದ ಡೆಸ್‌ಡಿಮೋನಳು ಎಚ್ಚೆತ್ತಳು. ಕಣ್ಣು ತೆರೆದು ನೋಡಿದಳು. ಅವನು ಹಲ್ಲುಮುಡಿ ಕಚ್ಚಿಕೊಂಡಿದ್ದನು. ಕಣ್ಣುಗುಡ್ಡೆಗಳು ಗಿರಗಿರನೆ ತಿರುಗುತ್ತಿದ್ದುವು. ಅವನ ಮುಖಭಾವವು ಈರೀತಿಯಲ್ಲಿದ್ದರೆ ಅದು ಸಂಹಾರಸೂಚಕವೆಂಬುದನ್ನು ಅವಳು ಬಲ್ಲವಳಾಗಿದ್ದಳು. ಒಥೆಲೋವು ಈ ದೃಷ್ಟಿಯಿಂದ ಅವಳನ್ನು ನೋಡುತ್ತ, " ಡೆಸ್‌ಡಿಮೋನಾ, ಸಾವಿಗೆ ಸಿದ್ಧಳಾಗು. ಭಗವಂತನನ್ನು ಪ್ರಾರ್ಥಿಸಿಕೊ. ನಾನು ನಿನ್ನನ್ನು ಕೊಂದರೂ,

ನಿನ್ನ ಆತ್ಮಕ್ಕೆ ಏಕೆ ದುರ್ಗತಿಯಾಗಬೇಕು?" ಎಂದನು. ಇದನ್ನು ಕೇಳಿ ನಿರಪರಾಧಿನಿಯಾದ ಆ ಸತೀಮಣಿಯು ಅವನಿಗೆ ನಮಸ್ಕಾರಮಾಡಿ, "ಪ್ರಭುವೇ ದಯಾಪರನಾಗು, ಸೈರಣೆಗೊಳ್ಳು, ಕೃಪೆವಹಿಸು; ನನ್ನ ಅಪರಾಧವನ್ನು ತಿಳಿಸು!" ಎಂದು ಬೇಡಿಕೊಂಡಳು. ಆಗ, ಸಂದೇಹ ಪಿಶಾಚಗ್ರಸ್ತನಾದ ಒಥೆಲೋವು ಕ್ಯಾಷಿಯೋವಿನ ಹೆಸರನ್ನೂ ಕರವಸ್ತ್ರದ ವೃತ್ತಾಂತವನ್ನೂ ಹೇಳಿದನು. ಕೂಡಲೆ ಆಕೆಯು ಅವನ ಸಂದೇಹವನ್ನು ಹೋಗಲಾಡಿಸಲು ಮಾತನಾಡುವುದಕ್ಕೆ ಹೊರಟಳು. ಆದರೆ ಒಥೆಲೋವು ಅವಳ ಯಾವ ಮಾತನ್ನೂ ಕೇಳಲೊಲ್ಲದೆ, ಹಾಸಿಗೆ ಬಟ್ಟೆಗಳನ್ನು ಅವಳ ಮೇಲೆ ಕವಿಚಿ, ಕತ್ತು ಮಿಸುಕಿ ಮಿಸುಕಿ ಅವಳನ್ನು ಕೊಂದುಬಿಟ್ಟನು.

ಈ ವೇಳೆಗೆ ಸರಿಯಾಗಿ ಕ್ಯಾಷಿಯೋವು ಗಾಯಗೊಂಡು ರಕ್ತ ಸುರಿಯುತ್ತ ಅಲ್ಲಿಗೆ ಬಂದನು. ಅಯಾಗೋವು ತನ್ನ ಕಡೆಯ ಮನುಷ್ಯ ನೊಬ್ಬನನ್ನು ಇವನನ್ನು ಕೊಲ್ಲುವಂತೆ ನಿಯಮಿಸಿದ್ದನು. ಅವನು ಕ್ಯಾಷಿಯೋವನ್ನು ಹೊಡೆಯಲು ಅವನಿಗೆ ಒಲವಾದ ಗಾಯವಾಯಿತೇ ಹೊರತು ಪ್ರಾಣ ಹೋಗಲಿಲ್ಲ. ಹೀಗೆ ಕ್ಯಾಷಿಯೋವು ಸಾಯದೆ ತಪ್ಪಿಸಿ ಕೊಂಡನು. ಆದರೆ ಈ ಕೊಲೆಯ ಉದ್ದೇಶವು ಬಹಿರಂಗವಾದೀತೆಂದು ಹೆದರಿ ಅಯಾಗೋವು ತನ್ನ ಕಡೆಯ ಆ ಮನುಷ್ಯನನ್ನು ತಾನೇ ಸಂಹರಿಸಿ ಬಿಟ್ಟನು. ಅವನ ಅಂಗಿಯ ಜೇಬಿನಲ್ಲಿ ಕೆಲವು ಕಾಗದಗಳು ದೊರೆತುವು. ಅವುಗಳಿಂದ ಕ್ಯಾಷಿಯೋವು ನಿರಪರಾಧಿಯೆಂದೂ, ಅಯಾಗೋವು ಅಪರಾಧಿಯೆಂದೂ ನಿರ್ವಿವಾದವಾಗಿ ತಿಳಿಯಿತು. ಕ್ಯಾಷಿಯೋವು ಈಗ ಒಥೆಲೋವಿನ ಕ್ಷಮಾಪಣೆ ಪಡೆಯುವುದಕ್ಕಾಗಿಯೂ, ತನ್ನ ಯಾವ ಅಪರಾಧಕ್ಕಾಗಿ ಅಯಾಗೋವು ತನ್ನನ್ನು ಕೊಲ್ಲುವಂತೆ ನಿಯಮಿತನಾಗಿದ್ದ ನೆಂಬುದನ್ನು ತಿಳಿಯುವುದಕ್ಕಾಗಿಯೂ ಬಂದಿದ್ದನು.

ಈ ವಿದ್ಯಮಾನಗಳು ತಿಳಿಯುತ್ತಲೇ, ಒಥೆಲೋವಿಗೆ ತಲೆಯಮೇಲೆ ಸಿಡಿಲುಬಡಿದಂತಾಯಿತು. "ಅಯ್ಯೋ, ನಾನು ಕೊಲೆಪಾತಕಿಯಾದೆನೇ! ಹಾ! ಸತೀಶಿರೋಮಣಿ! ಡೆಸ್‌ಡಿಮೋನಾ! ನಿರಪರಾಧಿನಿಯೂ ಪತಿ ವ್ರತೆಯೂ ಆಗಿದ್ದ ನಿನ್ನನ್ನು ಅನ್ಯಾಯವಾಗಿ ಕೊಂದೆನೇ!" ಎಂದು

ಹಂಬಲಿಸಲು ಮೊದಲು ಮಾಡಿದನು. ಮಹಾ ಸಂಕಟವಾಯಿತು. ಜೀವಕ್ಕೆ ಆಧಾರವೇ ತಪ್ಪಿದಂತಾಯಿತು. ಆದ್ದರಿಂದ ತನ್ನ ಕತ್ತಿಯಿಂದ ಇರಿದುಕೊಂಡು, ಅಪಚಾರಹೊಂದಿದ ತನ್ನ ಭಾರ್ಯೆಯ ಕಳೇಬರದ ಮೇಲೆ ಬಿದ್ದು ಪ್ರಾಣಬಿಟ್ಟನು. ಅವಿಮರ್ಶಜನ್ಯವಾದ ಈ ಕ್ರೂರಕಾರ್ಯಗಳನ್ನು ಕಂಡವರಿಗೆಲ್ಲಾ ಮಹಾ ಭಯವೂ ವಿಸ್ಮಯವೂ ಉಂಟಾದುವು.

ಒಥೆಲೋವಿನ ವಿಚಾರದಲ್ಲಿ ಜನಸಾಮಾನ್ಯಕ್ಕೆ ಬಹಳ ಗೌರವವಿತ್ತು. ಅವನು ಸ್ವಭಾವತಃ ಘನವಂತ. ಆದ್ದರಿಂದ ಅಯಾಗೋವಿನಲ್ಲಿ ಕೊನೆಯವರೆಗೂ ಸಂದೇಹಪಡಲಿಲ್ಲ. ಆ ನೀಚನ ತಂತ್ರಗಳಿಂದ ವಂಚಿತನಾಗುವವರೆಗೆ ತನ್ನ ಭಾರ್ಯೆಯಲ್ಲಿ ಪರಮಾನುರಾಗವುಳ್ಳವನಾಗಿದ್ದನು. ಅವನ ಪ್ರಣಯವು ಪಾರವಿಲ್ಲದ್ದು, ಆದರೆ ವಿವೇಕವಿಲ್ಲದ್ದು. ಒಥೆಲೋವು ಶೂರ; ಎಂದೂ ಅತ್ತವನಲ್ಲ. ಆದರೆ ಇಂದು ಅವನು ತನ್ನ ತಪ್ಪನ್ನು ಅರಿತೊಡನೆಯೇ ಧಾರಾಕಾರವಾಗಿ ಕಂಬನಿಗರೆದನು. ಅವನು ಸತ್ತರೂ ಅವನ ಗುಣಪರಾಕ್ರಮಗಳನ್ನು ಜನರು ಎಂದಿಗೂ ಮರೆಯುವಹಾಗಿರಲಿಲ್ಲ.

ಒಥೆಲೋವಿನ ಅನಂತರ ಅವನ ಸ್ಥಾನಕ್ಕೆ ಬಂದ ಅಧಿಕಾರಿಯು ಶಾಸನಾನುಸಾರವಾಗಿ ಅಯಾಗೋವಿಗೆ ಚಿತ್ರಹಿಂಸಾಪೂರ್ವಕವಾದ ಮರಣವನ್ನು ವಿಧಿಸಿ ಈ ಶೋಕವೃತ್ತಾಂತವನ್ನೆಲ್ಲಾ ವೆನಿಸ್ಸಿಗೆ ತಿಳಿಸಿದನು.

---

# ಜೂಲಿಯಸ್ ಸೀಸರ್

---

ಕ್ರಿಸ್ತಪೂರ್ವ ಒಂದನೆಯ ಶತಮಾನದಲ್ಲಿ ರೋಮ್ ಚಕ್ರಾಧಿಪತ್ಯವು ಹಲವು ರಾಜ್ಯಗಳನ್ನು ಸೇರಿಸಿಕೊಂಡು ವಿಸ್ತಾರವೂ ಪ್ರಬಲವೂ ಆಗಿತ್ತು. ಆಗ ರೋಮ್ ಸರ್ಕಾರವು ಪ್ರಜಾಧಿಪತ್ಯವೆನಿಸಿಕೊಂಡಿದ್ದರೂ ಅಲ್ಲಿ ಪ್ರಜಾಪ್ರತಿನಿಧಿಪ್ರಭುತ್ವವಿರಲಿಲ್ಲ. ಕೆಲವು ಮನೆತನಗಳವರು ಪಾರಂಪರ್ಯವಾದ ಹಕ್ಕುಳ್ಳವರಾಗಿ ರಾಜ್ಯಕಾರ್ಯಗಳನ್ನು ನಡೆಸುತ್ತಿದ್ದರು. ಇಂತಹ ಆಡಳಿತಕ್ಕೆ

ಒಳಪಟ್ಟು ನಡೆಯಲು ಜನರು ಒಪ್ಪದವರಾದರು; ಪಂಗಡಗಳೇರ್ಪಟ್ಟು ಅಂತಃಕಲಹಗಳುಂಟಾದುವು.

ಈ ಸನ್ನಿವೇಶವನ್ನು ಸ್ವಯಂ ಯೋಧನೂ ಅದ್ವಿತೀಯ ಸೇನಾ ನಾಯಕನೂ ಆದ ಸೀಸರನು ಬಹು ಜಾಗ್ರತೆಯಾಗಿಯೂ ಸ್ಪಷ್ಟವಾಗಿಯೂ ಗ್ರಹಿಸಿದನು. ತಾನೇ ಸರ್ವ ಸೈನ್ಯಕ್ಕೂ ಸ್ವಾಮಿಯಾಗಿದ್ದುದರಿಂದ ಇನ್ನೊಬ್ಬರ ಗೊಡವೆ ಇಲ್ಲದೆಯೇ ದಿಟ್ಟತನದಿಂದಲೂ ವಿತರಣೆಯಿಂದಲೂ ಏಕಾಧಿಪತ್ಯವಾಗಿ ರಾಜ್ಯಭಾರ ಮಾಡಬಹುದೆಂದೂ ಪ್ರಕೃತದಲ್ಲಿ ತಲೆದೋರುತ್ತಿದ್ದ ಕೆಡಕುಗಳನ್ನೆಲ್ಲಾ ಪರಿಹರಿಸಿ ಶಾಂತಿಯನ್ನು ನೆಲೆಗೊಳಿಸಬಹುದೆಂದೂ ಯೋಚಿಸಿಕೊಂಡನು.

ಆದರೆ ಈತನು ಇಷ್ಟು ಉದಾರಗುಣವುಳ್ಳವನಾಗಿದ್ದರೂ ಆ ಜನರು ಈತನ ಇಚ್ಛೆಯಂತೆ ಶಾಂತಿಪ್ರಿಯರಾಗಲಿಲ್ಲ. ಕೆಲವರು ಸಂದೇಹಕ್ಕೆ ಎಡೆಗೊಡದಂತೆ ಬಹಿರಂಗದಲ್ಲಿ ಹಿತರಂತೆಯೋ ಉದಾಸೀನರಂತೆಯೋ ಕಾಣುತ್ತಿದ್ದರೂ, ಅಂತರಂಗದಲ್ಲಿ ಮಾತ್ರ ಶತ್ರುತ್ವವನ್ನು ಸಾಧಿಸುವುದಕ್ಕೆ ತಕ್ಕ ಕಾಲವನ್ನು ನಿರೀಕ್ಷಿಸುತ್ತಲೇ ಇದ್ದರು.

ಈತನ ಸ್ವಕೀಯರಲ್ಲಿಯೂ ಕೆಲವರು ಅಸಂತುಷ್ಟರಾಗಿ ಹಗೆಗಳಾದರು. ಅವರಲ್ಲಿ ಪ್ರತಿಯೊಬ್ಬರೂ ರಾಜ್ಯಕಾರ್ಯದಲ್ಲಿ ಸ್ವತಂತ್ರವಾದ ಆಡಳಿತಗಳುಳ್ಳವರಾಗಿಯೂ, ಉತ್ಕಟ ಸ್ವಾರ್ಥಪರಾಯಣರಾಗಿಯೂ ಇದ್ದರು. ಈಗ ಸೀಸರನು ಆ ಅಧಿಕಾರಿಗಳ ಮಂತ್ರಾಲೋಚನೆಯನ್ನು ಕೇಳುತ್ತಿರಲಿಲ್ಲ. ಆದರೂ ಅವರ ಬುದ್ಧಿಸಾಹಸಗಳನ್ನರಿತು ಅವರವರ ಯೋಗ್ಯತೆಗೆ ಸರಿಯಾಗಿ ಅವರನ್ನು ಉತ್ತಮ ಪದವಿಗಳಲ್ಲಿ ಪ್ರತಿಷ್ಠಗೊಳಿಸಿದನು.

ಇಷ್ಟಾದರೂ ಅವರು ಪದವಿಯನ್ನು ಕಳೆದುಕೊಂಡವರಂತೆ ಭಾವಿಸಿಕೊಳ್ಳುತ್ತ, ಈತನಿಗೆ ಹಗೆಗಳಾದರು. ಇನ್ನು ಕೆಲವರು ಸೀಸರ್‌ನನ್ನು ಪ್ರೀತಿಸುತ್ತಿದ್ದರು. ಮತ್ತೆ ಕೆಲವರು ತಮ್ಮ ನಾಡಿನ ಸ್ವಾತಂತ್ರ್ಯವೇ ಅಮೂಲ್ಯವಾದ ಸಾಮ್ರಾಜ್ಯವೆಂದು ತಿಳಿದಿದ್ದರು. ಆದುದರಿಂದ ಒಬ್ಬನ ಕೈಯಲ್ಲಿಯೇ ಸಾಮ್ರಾಜ್ಯದ ಆಡಳಿತವೆಲ್ಲ ಸೇರುವುದು ಎಂದಾದರೂ ಅಪಾಯಕರವೆಂತಲೇ ಅವರು ಯೋಚಿಸುತ್ತಿದ್ದರು. ಸಾಮಾನ್ಯ ಜನರಾದರೋ

ಎಂದಿನಂತೆ ಉದಾಸೀನರಾಗಿದ್ದರು. ಪಾಂಪೆಯ ಕಡೆಯವರು ಜಯಶಾಲಿಗಳಾಗಿದ್ದಾಗ, ಜನರು ಎಲ್ಲೆಲ್ಲಿಯೂ ಗುಂಪುಸೇರಿ ವಿಜಯ ಕೋಲಾಹಲವನ್ನು ಮಾಡುತ್ತಿದ್ದರು; ಈಗಲಾದರೋ ಅದೇ ಜನರೇ, ಪಾಂಪೆಯ ಪಂಗಡವನ್ನು ಗೆದ್ದು ಜಯಶಾಲಿಯಾದ ಸೀಸರ್‌ನ ಪರವಾಗಿ ವಿಜಯೋತ್ಸವಗಳನ್ನು ಮಾಡುತ್ತಿದ್ದರು. ಹೀಗೆ ಸೀಸರನ ದಿಗ್ವಿಜಯಗಳ ಜೋಕೆಯಲ್ಲಿಯೇ ಅವನ ನಾಶಕ್ಕೆ ಬೀಜವೂ ಸಿದ್ಧವಾಗುತ್ತಿತ್ತು.

ಪ್ರತಿಸಂವತ್ಸರದಲ್ಲಿಯೂ ಫೆಬ್ರುವರಿ ಅಥವಾ ಮಾರ್ಚಿ ತಿಂಗಳಲ್ಲಿ ಒಂದು ಗೊತ್ತಾದ ದಿನ ಪಿವಾನ್‌ಟೈನ್ ಬೆಟ್ಟದ ತಪ್ಪಲಿನಲ್ಲಿ ರೋಮ್ ನಗರ ಸಂಸ್ಥಾಪನೆಯ ಸ್ಮಾರಕೋತ್ಸವವು ನಡೆಯುತ್ತಿತ್ತು. ಈ ವರ್ಷದ ಆ ಉತ್ಸವಕ್ಕ ಸೀಸರನು ಸಪರಿವಾರನಾಗಿ ಹೋಗಿದ್ದನು. ಅಲ್ಲಿ ಜನಗಳ ಗದ್ದಲವೋ ಗದ್ದಲ. ಆ ಗದ್ದಲದ ಮಧ್ಯದಿಂದ ಅವನನ್ನು ಯಾರೋ ಕೂಗಿದಂತೆ "ಸೀಸರ್" ಎಂಬ ಒಂದು ಕೀಚುದನಿಯು ಕೇಳಿಬಂತು. ಆಗ ಸೀಸರ್‌ನು ತನ್ನ ಬಳಿ ನಿಂತಿದ್ದ ಕ್ಯಾಸ್ಕನ ಕಡೆಗೆ ತಿರುಗಲು, ಮೃಷಾಸ್ತುತಿಗಾರನಾದ ಅವನು ಮಹಾಭಕ್ತನಂತೆ "ಸದ್ದು!" ಎಂದು ಜನರನ್ನು ಗದರಿಸಿದನು. ಕೂಗಿದವನು ಯಾರೆಂಬುದನ್ನು ಸೀಸರ್‌ನು ವಿಚಾರಿಸಲಾಗಿ, ಆತನ ಬಳಿಗೆ ಒಬ್ಬ ಜೋಯಿಸನು ಬಂದನು. ಅವನು ಸೀಸರ್‌ನನ್ನು ಕುರಿತು "ಸೀಸರ್! ಮಾರ್ಚಿತಿಂಗಳ ಹದಿನೈದನೆಯ ದಿನ ಜಾಗರೂಕನಾಗಿರು" ಎಂದು ಹೇಳಿದನು. ಸೀಸರ್‌ನು ಆ ಮಾತುಗಳನ್ನು ಶುದ್ಧ ಭ್ರಾಂತಿಯೆಂದು ಮನಸ್ಸಿಗೇ ತಂದುಕೊಳ್ಳದೆ, ಆಟಪಾಟ ವಿನೋದಗಳನ್ನು ನೋಡುತ್ತಾ ಮುಂದಕ್ಕೆ ಹೊರಟನು. ಈತನ ಜತೆಯಲ್ಲಿಯೇ ಈತನ ಅನುಚರರೂ ನೆರೆದಿದ್ದ ಇತರ ಜನರೂ ಹೊರಟರು.

ಆದರೆ ಬ್ರೂಟಸ್ ಮತ್ತು ಕ್ಯಾಸಿಯಸ್ ಎಂಬ ಇಬ್ಬರು ಸ್ನೇಹಿತರು ಅಲ್ಲಿಗೆ ಹೋಗಿರಲಿಲ್ಲ. ಇವರಿಬ್ಬರೂ ಪರಸ್ಪರ ಭಿನ್ನಪ್ರಕೃತಿಯುಳ್ಳವರಾದರೂ, ಒಬ್ಬರನ್ನೊಬ್ಬರು ಅಗಲಿರಲಾರದಷ್ಟು ಪ್ರಬಲವಾದ ಮೈತ್ರಿಯುಳ್ಳವರಾಗಿದ್ದರು. ಅಂದಿನ ರೋಮನರಲ್ಲೆಲ್ಲಾ ಬ್ರೂಟಸ್‌ನು ಮಹಾಸತ್ಯಸಂಧನೂ, ನಿಸ್ಪೃಹನಾದ ದೇಶಾಭಿಮಾನಿಯೂ, ವಿವೇಕಯುಕ್ತನಾದ

ಸ್ಥೈರ್ಯವಂತನೂ, ವಿದ್ಯಾವಂತನೂ, ತತ್ವವಿದನೂ, ವಾಗ್ಮಿಯೂ ಆಗಿದ್ದನು. ಈತನು ಮಗುವಿನಂತೆ ನಿರ್ದುಷ್ಟಚರಿತನಾಗಿಯೂ ಸತ್ಯಶೀಲನಾಗಿಯೂ ಇದ್ದುದರಿಂದ ಇತರರೂ ತನ್ನಂತೆಯೇ ಇರುವರೆಂದು ಭಾವಿಸಿದ್ದನು. ಇವನಿಗೆ ಸೀಸರ್‌ನಲ್ಲಿ ಪ್ರೀತಿಯಿದ್ದಿತು. ಸೀಸರನೂ ಇವನನ್ನು ಗೌರವದಿಂದ ಕಾಣುತ್ತಿದ್ದನು. ಆಗಿನ ರೋಮನರಲ್ಲಿ ತಮ್ಮ ಸ್ವಾತಂತ್ರ್ಯಕ್ಕೂ ಪ್ರಜೆಗಳಿಗೆ ಹಿತಪ್ರದವಾಗಿ ನಡೆಯಬೇಕಾದ ರಾಜ್ಯಭಾರಕ್ಕೂ, ಸಮಸ್ತ ಅಧಿಕಾರವೂ ಒಬ್ಬನ ಕೈಸೇರುವುದು ಅಪಾಯಕರವೆಂದು ಕೆಲವರು ಅಭಿಪ್ರಾಯಪಡುತ್ತಿದ್ದರೆಂದು ಹಿಂದೆಯೇ ವಿವರಿಸಿರುವೆವಷ್ಟೆ. ಬ್ರೂಟಸನಿಗೂ ಇದೇ ದೃಢವಾದ ನಂಬಿಕೆ. ಸದ್ಯಃಸ್ಥಿತಿಯನ್ನು ನೋಡುತ್ತಿದ್ದ ಅವನಿಗೆ ದಿನದಿನಕ್ಕೂ ಖೇದವೂ ಅಸಮಾಧಾನವೂ ಹೆಚ್ಚುತ್ತ ಬಂದುವು. ಕ್ಯಾಸಿಯಸ್‌ನೂ ಈ ವಿಚಾರದಲ್ಲಿ ಅಸಹ್ಯಗೊಂಡಿದ್ದನು. ಆದರೆ ಇವನು ಬ್ರೂಟಸ್‌ನಷ್ಟು ಉದಾರಮನಸ್ಕನಲ್ಲವಾದುದರಿಂದ ಕೆಲವು ಸಾಮಾನ್ಯ ವಿಷಯಗಳಿಗೂ ಅಸಹ್ಯಗೊಂಡು ಸೀಸರ್‌ನಿಗೆ ಹಗೆಯಾದನು. ಇವನಿಗೆ ಆತನ ಪದವಿಗಾಗಿ ಅಸೂಯೆಯೂ ಇತ್ತು. ಈ ಸ್ನೇಹಿತರು ಅಂದು ಇಬ್ಬರೇ ಇರಲು, ಕ್ಯಾಸಿಯಸ್‌ನು "ನೀನು ನೋಟಕ್ಕೆ ಹೋಗುವುದಿಲ್ಲವೇ?" ಎಂದು ಬ್ರೂಟಸ್‌ನನ್ನು ಕೇಳಿದನು.

ಬ್ರೂಟಸ್—"ಇಲ್ಲ. ನನಗೆ ಆಟಪಾಟಗಳಲ್ಲಿ ಅಭಿರುಚಿ ಇಲ್ಲ. ಆನ್‌ಟೊನಿಯಂತೆ ನಾನು ವಿನೋದಪ್ರಿಯನಲ್ಲ. ಬೇಕಾದರೆ, ನೀನು ಹೋಗಬಹುದು.'

ಕ್ಯಾಸಿಯಸ್—"ಗೆಳೆಯಾ, ಉಲ್ಲಾಸದಿಂದ ಕೂಡಿರುತ್ತಿದ್ದ ನಿನ್ನ ಮನೋಭಾವವು ಈ ದಿನ ಹೀಗೆ ಕುಂದಿರುವುದಕ್ಕೆ ಕಾರಣವೇನು? ಮಿತ್ರನಾದ ನನ್ನಲ್ಲಿ ಯಾವಾಗಲೂ ನೀನು ತೋರಿಸುತ್ತಿದ್ದ ದಾಕ್ಷಿಣ್ಯವಾತ್ಸಲ್ಯಗಳು ಈಗ ಏಕೆ ದೂರವಾದುವು? ನೀನೇಕೆ ಇಷ್ಟು ಅಪೂರ್ವವಾದ ಕಾಠಿಣ್ಯವನ್ನು ತೋರ್ಪಡಿಸುತ್ತಿರುವೆ?"

ಬ್ರೂಟಸ್—"ಮಿತ್ರಾ, ನನಗೆ ಚಿತ್ತಸ್ವಾಸ್ಥ್ಯವಿಲ್ಲ. ನನ್ನ ಮನಸ್ಸೇ ನನ್ನೊಡನೆ ಘೋರವಾಗಿ ಹೋರಾಡುತ್ತಿದೆ. ಆದುದರಿಂದಲೇ ನಾನು



ಬ್ರೂಟಸ್, ಆನ್‌ಟೊನಿ ಮತ್ತು ಆಕ್ಟೇವಿಯಸ್ ಸೀಸರ್ ಇವರ ಸಂಭಾಷಣೆ.

ಸರಳನಾಗಿ ನಡೆಯದಿರುವವನಂತೆ ಸ್ನೇಹಿತನಿಗೂ ತೋರುವುದಕ್ಕೆ ಕಾರಣ ವಾಗಿದೆ."

ಕ್ಯಾಸಿಯಸ್—"ಹಾಗಾದರೆ ಅಪಚಾರವಾಯಿತು. ತಪ್ಪು ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು, ನಿನಗೆ ತಿಳಿಸಬೇಕಾದ ಕೆಲವು ಮುಖ್ಯ ವಿಚಾರಗಳನ್ನು ತಿಳಿಸದೆ ಅಪರಾಧಿಯಾದೆನು. ದಯೆಮಾಡಿ ಕ್ಷಮಿಸು. ಅಯ್ಯಾ, ನಿನ್ನ ಮುಖ ನಿನಗೆ ಕಾಣುತ್ತದೆಯೇ?"

ಬ್ರೂಟಸ್—"ಕನ್ನಡಿಯ ಸಹಾಯವಿಲ್ಲದೇ ಹೇಗೆ ನೋಡಿಕೊಳ್ಳಲು ಸಾಧ್ಯ?"

ಕ್ಯಾಸಿಯಸ್—"ನನಗೆ ಇದೇ ವಿಷಾದಕ್ಕೆ ಕಾರಣವಾದುದು. ನಿನ್ನಲ್ಲಿರುವ ಪ್ರಚ್ಛನ್ನವಾದ ಶ್ರೇಷ್ಠತೆಯನ್ನು ನೀನು ಕಣ್ಣು ತೆರೆದು ನೋಡುವಂತೆ ಮಾಡುವ ಕನ್ನಡಿಗಳಿಲ್ಲವಾದುವೆ! ತನ್ನನ್ನು ಅಮರನೆಂದು ಭಾವಿಸಿಕೊಂಡಿರುವ ಸೀಸರ್‌ನ ಹೊರತು ರೋಮಿನ ಸಮಸ್ತರೂ ಈ ಕಾಲದಲ್ಲಿ ಮುಲುಗುತ್ತಿರುವರು. ನೀನು ನಿನ್ನನ್ನೂ ಈಗಿನ ಸನ್ನಿವೇಶವನ್ನೂ ಸ್ಪಷ್ಟವಾಗಿ ತಿಳಿಯುವವನಾಗಬೇಕೆಂದು ಜನರು ಅಪೇಕ್ಷಿಸುವರು."

ಬ್ರೂಟಸ್—"ಅಯ್ಯಾ, ನಿನ್ನ ಅಭಿಪ್ರಾಯವನ್ನು ಸ್ಪಷ್ಟವಾದ ರೀತಿಯಲ್ಲಿ ಏಕೆ ತಿಳಿಸಲೊಲ್ಲೆ?"

ಕ್ಯಾಸಿಯಸ್—"ಸಖನೆ, ಸಾವಧಾನದಿಂದ ಲಾಲಿಸು. ನಿನ್ನನ್ನು ನೀನು ಸರಿಯಾಗಿ ತಿಳಿಯದಿರುವುದರಿಂದ ನಾನು ನಿನಗೆ ಉಪನೇತ್ರವಾಗುವೆನು. ಆದರೆ ನನ್ನ ವಿಚಾರದಲ್ಲಿ ದುರಾಗ್ರಹವನ್ನಾಗಲಿ, ಸಂದೇಹವನ್ನಾಗಲಿ, ಇಟ್ಟುಕೊಳ್ಳಬೇಡ.... . . "

ಈ ವೇಳೆಗೆ ಜನಸಂದಣಿಯಲ್ಲಿ ಜಯಘೋಷವಾಯಿತು. ಅದನ್ನು ಕೇಳಿ,

ಬ್ರೂಟಸ್—"ಈ ಗದ್ದಲಕ್ಕೆ ಕಾರಣವೇನು? ಜನರು ಸೀಸರ್‌ನನ್ನು ರಾಜನನ್ನಾಗಿ ಮಾಡಿಬಿಡುವರೋ ಎಂದು ಭಯವಾಗುತ್ತಿದೆ!"

ಕ್ಯಾಸಿಯಸ್—"ಅದಕ್ಕಾಗಿ ಭಯವೇ? ಸೀಸರನು ರಾಜನಾಗುವುದು ನಿನಗೆ ಅಸಮ್ಮತವೇ?"

ಬ್ರೂಟಸ್—"ಅಹುದು. ನನಗೆ ಅಸಮ್ಮತವೇ. ಸೀಸರ್‌ನೇ ಅಲ್ಲ. ಯಾವನೊಬ್ಬನು ರೋಮಿಗೆ ರಾಜನಾಗುವುದೂ ಅಸಮ್ಮತವೇ ಸರಿ. ಸೀಸರನಲ್ಲಿ ನನಗೆ ಮಿಗಿಲಾದ ಪ್ರೀತಿ ಇದೆ. ಆದರೂ ಅವನು ರಾಜನಾಗ ಕೂಡದು. ನಮಗೆ ಬೇಕಾದುದು ಸರ್ವಪ್ರಜೆಗಳ ಸ್ವಾತಂತ್ರ್ಯವನ್ನೂ ಅಂಗೀಕರಿಸುವ ಪ್ರಜಾಧಿಪತ್ಯ. ನನ್ನನ್ನು ಇಷ್ಟು ಹೊತ್ತು ಇಲ್ಲಿ ನಿಲ್ಲಿಸಿ ಕೊಂಡುದೇಕೆ? ದೇಶಹಿತಸಾಧನೆಯಾಗಿದ್ದರೆ ಆ ಕೆಲಸವನ್ನು ಮೊದಲು ಹೇಳು. ಸತ್ಕೀರ್ತಿಯನ್ನು ಸಂರಕ್ಷಿಸಿಕೊಳ್ಳಬೇಕೆಂಬ ಆಸೆಗಿಂತಲೂ ಪ್ರಾಣ ವನ್ನು ಸಂರಕ್ಷಿಸಿಕೊಳ್ಳಬೇಕೆಂಬ ಆಸೆಯು ನನಗೆ ಹೆಚ್ಚಾಗಿರದಂತೆ ದೇವರು ದಯಪಾಲಿಸಲಿ!"

ಈ ಮಾತುಗಳಿಂದ ಮಿಗಿಲಾಗಿ ಪ್ರೋತ್ಸಾಹಗೊಂಡ ಕ್ಯಾಸಿ ಯಸ್‌ನು, "ಅಯ್ಯಾ, ನಾನು ಹೇಳುವ ವಿಚಾರವೂ ಕೀರ್ತಿವಿಷಯಕ ವಾದುದೇ. ಇತರರೂ ನೀನೂ ಈ ಜೀವಿತದ ವಿಚಾರದಲ್ಲಿ ಏನು ತಿಳಿದಿರು ವಿರೋ ನಾನು ಕಾಣೆ. ನಾನಾದರೋ, ಇದನ್ನು ಕ್ಷಣಭಂಗುರವೆಂತಲೇ ತಿಳಿದಿರುವೆನು. ಮಾನ ಬಿಟ್ಟು ಬಾಳುವುದೇಕೆ? ಸೀಸರನೂ ನಮ್ಮಂತೆಯೇ ಒಬ್ಬ ಮನುಷ್ಯ. ಎಲ್ಲರೂ ಅವನಂತೆಯೇ ಸ್ವತಂತ್ರರು. ಪದವಿ ಸ್ವಾತಂತ್ರ್ಯ ಗಳಲ್ಲಿ ಅವನು ಇತರರಿಗಿಂತ ಹೇಗೆ ಹೆಚ್ಚಿನವನು? ಅವನು ಸಮರ್ಥನಾದ ಈಜುಗಾರ, ನಾನೂ ಅವನ ಜತೆಯಲ್ಲಿಯೇ ಭೋರ್ಗರೆಯುವ ಟೈಬರ್ ನದಿಯಲ್ಲಿ ಈಜಿದೆನು. ಮುಳುಗಿಹೋಗುವ ಸಂದರ್ಭ ಬರಲು, ಅವನು ನನ್ನನ್ನು ಸಹಾಯಮಾಡೆಂದು ಕೂಗಿಕೊಂಡನು. ಸ್ಪೈಯಿನ್ ದೇಶಕ್ಕೆ ವಿಜಯಯಾತ್ರೆಗಾಗಿ ಹೋಗಿದ್ದಾಗ ಜ್ವರಪೀಡಿತನಾಗಿ ಅವನು ನರಳುತ್ತ ಮುಲುಕುತ್ತ ಇದ್ದುದನ್ನು ನಾನು ಬಲ್ಲೆನು ತನ್ನನ್ನು ಅಮರ್ತ್ಯನೆಂದು ತಿಳಿದುಕೊಂಡಿರುವ ಅವನ ಹೇಡಿ ತುಟಿಗಳು ಆಗ ಕಾಂತಿಹೀನವಾದುವು. ದೃಷ್ಟಿಸಿದ ಮಾತ್ರದಿಂದಲೇ ಭೂಮಂಡಲವನ್ನೆಲ್ಲಾ ತತ್ತರಗೊಳಿಸುತ್ತಿರುವ ಆ ಕಣ್ಣುಗಳು ನಿಶ್ಚೇಷ್ಟಿತವಾಗಿದ್ದುವು. ರೋಮನರನ್ನು ಆಜ್ಞೆ ಮಾಡುವ ಆ ನಾಲಗೆಯು "ನನಗೆ ಕುಡಿಯುವುದಕ್ಕೆ ಒಂದಿಷ್ಟು ನೀರು ಕೊಡಿ" ಎಂದು ಒಬ್ಬ ಹುಡುಗಿಯಂತೆ ಕೇಳಿಕೊಂಡಿತು. ಹಾ! ದೇವದೇವನೆ! ಇಂತಹ

ದುರ್ಬಲ ಪ್ರಕೃತಿಯವನು ರೋಮ್ ಜನಾಂಗದಲ್ಲೆಲ್ಲಾ ಮಿಗಿಲಾದವನಾಗಿ ಪ್ರಪಂಚದ ಸಾಮ್ರಾಜ್ಯಗಳಲ್ಲಿ ಮಹತ್ತಾದ ರೋಮ್ ಸಾಮ್ರಾಜ್ಯಕ್ಕೆ ಚಕ್ರಾಧಿಪತಿಯಾಗತಕ್ಕವನೆ! ಆ ಸೀಸರ್‌ನಿಗೆ ಈ ಪ್ರಪಂಚವೇ ಲಕ್ಷ್ಯದಲ್ಲಿಲ್ಲ. ನಾವೆಲ್ಲರೂ ಅಲ್ಪರಾದ ಮನುಷ್ಯರಂತೆ ಅವನ ಪಾದಮೂಲದಲ್ಲಿ ಅಲೆದಾಡುತ್ತ, ಖ್ಯಾತಿಹೀನರಾಗಿ ಮೃತರಾಗಬೇಕಲ್ಲವೆ! ಮನುಷ್ಯರು ಎಂದೂ ತಮ್ಮ ತಮ್ಮ ಅದೃಷ್ಟಕ್ಕೆ ತಾವು ತಾವು ಕಾರಣಕರ್ತರಾಗಿಯೇ ಇರುವರು. ನಾವು ಅಲ್ಲದಂತೆ ನಡೆದರೆ ಅದು ನಮ್ಮ ತಪ್ಪೇ ವಿನಾ ನಮ್ಮ ಜನ್ಮಗಳಾಗಲಿ ಜಾತಕಗಳಾಗಿ ನಿಂದಿತಗಳಲ್ಲ. ಸೀಸರ್‌ನೇಕೆ ಬ್ರೂಟಸ್‌ಗಿಂತ ಮಿಗಿಲಾದವನಾಗಬೇಕು ? ರೋಮ್‌ನಲ್ಲಿ ಮನುಷ್ಯನು ಒಬ್ಬನೇ ಒಬ್ಬನಿರುವನೋ ? ಮಿಕ್ಕವರು ಪಶುಗಳೋ ? ಈ ಕಾಲದಲ್ಲಿ ರೋಮ್ ಏಕೆ ಹೀನಸ್ಥಿತಿಗೆ ಬರಬೇಕು ? ಹಾ ಕಾಲವೇ ! ಅಪವಾದಕ್ಕೆ ಈಡಾದೆಯಾ ? ಅಯ್ಯೋ ! ರೋಮ್ ದೇಶವೇ, ನೀನು ಘನವಂತರಾದ ಹಲವು ಮಂದಿ ಮಕ್ಕಳ ತಾಯಿಯಾಗಿದ್ದೆಯಲ್ಲಾ ! ಈಗ ಲೋಕವೆಲ್ಲಾ ನಿನ್ನನ್ನು ಏನೆನ್ನುವುದು ? ಗೆಳೆಯಾ, ಹಿಂದೆ ರೋಮನ್ನು ದುರಾಶೆಯಿಂದ ಆಕ್ರಮಿಸಿಕೊಂಡಿದ್ದ ಪಿಶಾಚವನ್ನು ನಿನ್ನ ಪಿತಾಮಹರು ತೊಲಗಿಸಿದರೆಂದು ನಮ್ಮ ಹಿರಿಯರು ಹೇಳುತ್ತಿದ್ದುದನ್ನು ಕೇಳಿದ್ದೆನು.''

ಬ್ರೂಟಸ್—''ಅಯ್ಯಾ ಕ್ಯಾಸಿಯಸ್, ನಿನಗೆ ನನ್ನಲ್ಲಿ ಪ್ರೀತಿಯಿದೆ ಎಂಬುದಕ್ಕೆ ಸಂದೇಹವಿಲ್ಲ. ನಾನು ಏನು ಮಾಡಬೇಕೆಂದು ನಿನ್ನ ಅಭಿಪ್ರಾಯ ? ನಿನಗೂ ರೋಮಿನ ಸದ್ಯಃಸ್ಥಿತಿಯು ಚೆನ್ನಾಗಿ ತಿಳಿದಿದೆ. ಇಂತಹ ಸಮಯದಲ್ಲಿ, ಇಂತಹ ಕಠಿಣವಾದ ಸ್ಥಿತಿಯಲ್ಲಿ, ನಾನು ರೋಮನನಾಗಿ ರೋಮನನೆಂದು ಕರೆಯಿಸಿಕೊಳ್ಳುವುದಕ್ಕಿಂತ ಕುಗ್ರಾಮವಾಸಿಯಾಗಿರಬಾರದಾಗಿದ್ದಿತೆ! ಎನ್ನಿಸುವುದು.''

ಕ್ಯಾಸಿಯಸ್—''ನನ್ನ ಮಾತು ನಿಸ್ಸತ್ವವಾಗಿದ್ದರೂ ನಿನ್ನ ಮನಸ್ಸಿಗೆ ಅಂಟಿರುವುದು. ನನಗೆ ಸಂತೋಷವಾಯಿತು.''

ಈ ವೇಳೆಗೆ ಅಂದಿನ ಉತ್ಸವಗಳು ಮುಗಿದು ಸೀಸರ್‌ನೂ ಅವನ ಅನುಚರರೂ ಹಿಂದಿರುಗಿ ಬಂದರು. ದಾರಿಯಲ್ಲಿ ಬ್ರೂಟಸ್, ಕ್ಯಾಸಿಯಸ್ ಕಣ್ಣಿಗೆ ಬಿದ್ದರು.

ಸೀಸರನು ಆನ್‌ಟೊನಿಯನ್ನು ಕುರಿತು "ಕ್ಯಾಸಿಯಸ್ಸನನ್ನು ನೋಡು! ಹೇಗೆ ತೆಳ್ಳಗೆ ಹಸಿದಿರುವವನಂತೆ ಕಾಣಿಸುವನು! ಯಾವಾಗಲೂ ಯೋಚನೆ ಹಿಡಿದವನಂತೆಯೇ ಇರುವನು. ಇವನಂಥವರು ಪ್ರಮಾದ ಕಾರಿಗಳು" ಎಂದನು.

ಆನ್‌ಟೊನಿ—"ಭಯಕ್ಕೇನು ಕಾರಣವಿಲ್ಲ. ಅವನು ಸಾಧು ವಾಗಿಯೂ, ಗಣ್ಯನಾದ ರೋಮನನಾಗಿಯೂ ಇರುವನು."

ಸೀಸರ್—"ಆನ್‌ಟೊನಿ, ಅವನು ಪುಷ್ಟಿಯಾಗಿ ಬೆಳೆದು ಉಲ್ಲಾಸ ದಿಂದಿರಬೇಕೆಂಬುದು ನನ್ನ ಕೋರಿಕೆ. ಭಯವಿಷಯವಲ್ಲ. ಸೀಸರ್‌ಗೆ ಭಯವೆ? ನಾನು ಭಯಪಡುವುದಾದರೆ ಅವನನ್ನು ದೂರವಿಡುವೆನು. ನೋಡು, ಅವನು ಬಹುವಾಗಿ ಓದುವನು, ವಿದ್ಯಮಾನಗಳನ್ನು ಬಹು ಲಕ್ಷ್ಯವಿಟ್ಟು ತಿಳಿಯುವನು; ಅವನಿಗೆ ವಿನೋದಗಳಲ್ಲಿ ಉಲ್ಲಾಸವೇ ಇಲ್ಲ; ಸಂಗೀತವು ಬೇಕಿಲ್ಲ; ಹಾಸ್ಯಮಾಡಿದರೆ ನಗುವುದಿಲ್ಲ; ಇಂತಹ ಜನರನ್ನು ಒಲಿಸಿಕೊಳ್ಳುವುದು ಸರ್ವಥಾ ಅಸಾಧ್ಯ."

ಹೀಗೆ ಅವರು ಮಾತನಾಡಿಕೊಂಡು ಹೋಗುತ್ತಿರಲು ಇವರ ಜೊತೆಯಲ್ಲಿದ್ದ ಕ್ಯಾಸ್ಕಾನನ್ನು ಕ್ಯಾಸಿಯೋವು ಸೆರಗೆಳೆದು ನಿಲ್ಲಿಸಿಕೊಂಡು ಉತ್ಸವದ ಸಮಾಚಾರವನ್ನು ಕೇಳಿದನು.

ಕ್ಯಾಸ್ಕಾ—"ಸಮಾಚಾರವೇನು ಬಂತು! ಸೀಸರನಿಗೆ ಒಂದು ಕಿರೀಟವನ್ನು ಕೊಡುವುದಕ್ಕೆ ಹೋದರು. ಆನ್‌ಟೊನಿ ಮೂರು ಸಲ ಕೊಡುವುದಕ್ಕೆ ಹೋದ; ಮೂರು ಸಲವೂ ಸೀಸರನು ಬೇಡವೆಂದು ಕೊನೆಗೆ ಬಿದ್ದುಬಿಟ್ಟ."

ಬ್ರೂಟಸ್—"ಇರಬಹುದು; ಅವನಿಗೆ ಬೀಳುವ ರೋಗವಿದೆ."

ಕ್ಯಾಸಿಯಸ್—"ಬೀಳುವ ರೋಗ ಸೀಸರನಿಗಲ್ಲ; ನಮಗೆ!"

ಹೀಗೆ ಕ್ಯಾಸಿಯಸ್‌ನು ಕ್ರಮವಾಗಿ ಬ್ರೂಟಸ್‌ನ ಮನಸ್ಸನ್ನು ಕೆಡಿಸಿದನು. ಪ್ರಜೆಗಳು ಅವನಿಂದ ಉದ್ಧಾರವನ್ನು ನಿರೀಕ್ಷಿಸುತ್ತಿರುವಂತೆ ಸುಳ್ಳು ಕಾಗದ ಪತ್ರಗಳನ್ನು ಅವನ ದೃಷ್ಟಿಗೆ ಬೀಳಿಸಿ, ಮಿಕ್ಕ ಕೆಲವರನ್ನು ತನ್ನ ಕಡೆಗೆ ಒಲಿಸಿಕೊಂಡನು. ಒಳಗೇ ಪಿತೂರಿಯು ಬಲಿಯುತ್ತಿತ್ತು.

ಮಾರ್ಚಿ ಹದಿನೈದನೆಯ ತಾರೀಖು ಹತ್ತಿರವಾಯಿತು. ಅಷ್ಟು ಹೊತ್ತಿಗೆ ಎಲ್ಲೆಲ್ಲಿ ನೋಡಿದರೂ ಕಳವಳ; ಮಳೆ ಬಿರುಗಾಳಿ; ಸಿಡಿಲು ಗುಡುಗು ಮಿಂಚು; ಹಗಲೇ ಗೂಬೆ ಕೂಗಿತೆನ್ನುವವರು ಒಬ್ಬರು, ಸಿಂಹ ಊರೊಳಕ್ಕೆ ತಪ್ಪಿಸಿಕೊಂಡು ಬಂದಿತ್ತೆನ್ನುವವರು ಮತ್ತೊಬ್ಬರು; ಬೆಂಕಿಯ ಮನುಷ್ಯರನ್ನು ನೋಡಿದೆವೆನ್ನುವವರು ಇನ್ನೊಬ್ಬರು. ಇಂಥ ಉತ್ಪಾತ ದೂಷಿತವಾದ ಕಾಲದಲ್ಲಿ ಒಂದು ರಾತ್ರಿ ಕ್ಯಾಸಿಯಸ್ಸನೂ ಮತ್ತೆ ಕೆಲವರು ದ್ರೋಹಿಗಳೂ ಕಳ್ಳರಂತೆ ಮುಸುಕಿಟ್ಟುಕೊಂಡು ಬ್ರೂಟಸ್ಸನ ಮನೆಗೆ ಬಂದರು.

ಆಗ ಬ್ರೂಟಸ್‌ನು ನಿದ್ರೆ ಬರದೆ ತನ್ನ ಉದ್ಯಾನದಲ್ಲಿ ಚಿಂತಿಸುತ್ತ ಮೆಲ್ಲಗೆ ನಡೆದಾಡುತ್ತಿದ್ದನು. ಗಾಢಾಂಧಕಾರದ ಆ ರಾತ್ರಿಯಲ್ಲಿ ಅವನ ಶಯ್ಯಾಗೃಹದೊಳಗೆ ಒಂದು ಸಣ್ಣ ದೀವಿಗೆಯು ಮಾತ್ರ ಮಿನುಗುತ್ತಿದ್ದಿತು. ಆಗ ಅವನು ತನ್ನಲ್ಲಿಯೇ ತಾನು '' ಸೀಸರ್‌ನ ಮರಣದಿಂದಲೇ ರೋಮ್ ಸಾಮ್ರಾಜ್ಯವು ಸ್ವಾತಂತ್ರ್ಯವನ್ನು ಪಡೆಯಬೇಕು. ಅವನ ಮರಣವನ್ನು ಹಾರೈಸಲು ನನಗೆ ಸ್ವಕೀಯವಾದ ಕಾರಣವಾವುದೂ ಇಲ್ಲ. ಸಮಸ್ತ ಪ್ರಜಾಕ್ಷೇಮವೇ ಘನವಾದ ಕಾರಣ. ಒಂದು ವೇಳೆ ಅವನು ರಾಜನಾದರೆ, ಆಗ ಅವನ ರೀತಿಯಲ್ಲಿ ಮಾರ್ಪಾಟಾಗುವುದೇ? ಇಲ್ಲ. ಆ ಅಧಿಕಾರದಿಂದ ಅವನಿಗೆ ಒಂದು ಆಯುಧವು ದೊರೆತಂತಾಗುವುದು. ಅವನು ಸ್ವೇಚ್ಛೆಯಾಗಿ ನಡೆಯುತ್ತ ಪ್ರಮಾದಕಾರಿಯಾಗಬಹುದು. ಆದರೂ ಸೀಸರ್‌ನು ಒಂದೊಂದು ವಿಷಯದಲ್ಲಿಯೂ ಕಾರಣಗಳನ್ನು ಸರಿಯಾಗಿ ವಿವೇಚನೆಮಾಡಿ ಅವುಗಳನ್ನು ತನ್ನ ಇಚ್ಛೆಗೆ ಅಧೀನಮಾಡಿಕೊಳ್ಳದೆ ನಡೆಯುವ ಸಂದರ್ಭವನ್ನು ನಾನು ಕಂಡಿಲ್ಲ. ಇರಲಿ. ಇವೆಲ್ಲವೂ ಸಾಮಾನ್ಯವಾದ ನಿದರ್ಶನಗಳು. ಈ ದೀನಭಾವವೂ, ಜನರನ್ನು ಒಲಿಸಿಕೊಳ್ಳುವ ಮೃದುರೀತಿಯೂ, ಅಹಂಭಾವದ ಶೈಶವಾವಸ್ಥೆಯಾಗಿರುತ್ತ, ಅದರ ಬೆಳವಣಿಗೆಗೆ ಹಂತಗಳಾಗಿರುತ್ತವೆ. ಈ ಹಂತಗಳ ಮೇಲೆ ಹೆಜ್ಜೆ ಇಟ್ಟು ಹತ್ತಲು ಕೆಳಗಿನ ಹಂತಗಳಿಗೆ ವಿಮುಖನಾಗಿ ಮುಂದಿನ ಹಂತಗಳಿಗೆ ಅಭಿಮುಖನಾಗಬೇಕಷ್ಟೆ. ಒಮ್ಮೆ ಮೇಲಿನ ಹಂತವನ್ನು ತಲಪುತ್ತಲೇ

ಅಂತರಿಕ್ಷವನ್ನು ನೋಡುವನಲ್ಲದೆ ತಾನು ಹತ್ತಿಬಂದ ಕೆಳಗಿನ ಹಂತಗಳನ್ನು ಅಲ್ಪವಾದವುಗಳೆಂದು ತಿಳಿಯುವನು ಹೀಗಾಗಲು ದಾರಿಕೊಡದಿರುವುದೇ ಮೇಲು. ಹಾವು ಮೊಟ್ಟೆಯೊಡೆಯುತ್ತಲೇ ಬೆಳೆದು ಅಪಾಯಪ್ರದವಾಗುವುದು. ಆದುದರಿಂದ ಮೊಟ್ಟೆಯಾಗಿರುವಾಗಲೇ ಅದನ್ನು ಧ್ವಂಸಮಾಡುವುದು ಉತ್ತಮ " ಎಂದು ಆಲೋಚಿಸುತ್ತಿದ್ದನು.

ಹೀಗೆ ಈ ಸಂಚುಗಾರರು ಬರುವ ವೇಳೆಗೆ ಬ್ರೂಟಸ್‌ನು ಸುಲಭವಾಗಿ ಇವರ ತಂತ್ರಜಾಲಕ್ಕೆ ಬೀಳುವ ಸ್ಥಿತಿಯಲ್ಲಿದ್ದನು. ಕ್ಯಾಸಿಯಸ್ಸನು ಒಂದೆರಡು ಮಾತನಾಡುತ್ತಲೆ, ಬ್ರೂಟಸ್‌ನು ಕಾರ್ಯತತ್ಪರನಾದನು.

ಕ್ಯಾಸಿಯಸ್—" ಸೀಸರ್‌ನ ಅದೃಷ್ಟವೇ ಆನ್‌ಟೊನಿಗೂ ಪ್ರಾಪ್ತವಾಗಬೇಕು "

ಬ್ರೂಟಸ್—" ಆಗದಾಗದು, ಈಗ ಪ್ರಜಾಸ್ವಾತಂತ್ರ್ಯ ಸೌಖ್ಯಕ್ಕೆ ಅಡ್ಡಿಯಾಗಿರುವ ಪಿಶಾಚವನ್ನು ನಿವಾರಣೆಮಾಡುವ ಕೆಲಸಕ್ಕೆ ನಾವು ಕೈಹಾಕಿರುವೆವಲ್ಲದೆ, ಕಟುಕತನವನ್ನು ಕೈಗೊಂಡಿಲ್ಲವಲ್ಲ ! ಸೀಸರನ ರುಂಡವು ಬಿದ್ದುಹೋದನಂತರ ಅವನ ಕೈಗಳಿಂದ ಯಾರಿಗೂ ಹೇಗೆ ಅಪಾಯವಿಲ್ಲವೋ, ಆನ್‌ಟೊನಿಯಿಂದಲೂ ಹಾಗೆಯೇ. ಆದುದರಿಂದ ಆನ್‌ಟೊನಿಯನ್ನು ಕೊಲೆ ಮಾಡಲಾಗದು. ಸೀಸರನು ಪ್ರಜಾಧಿಪತ್ಯಕ್ಕೆ ಕುಠಾರಸ್ವರೂಪನಾಗಿರದೆ, ತಾನೂ ಒಬ್ಬ ಪ್ರಜೆಯಂತೆ ತನ್ನ ಹಿತವನ್ನೂ ಸಮಸ್ತರ ಹಿತವನ್ನೂ ಒಂದಾಗಿ ಭಾವಿಸಿ ನಡೆಯುವವನಾಗಿದ್ದರೆ, ಅವನ ವಿಚಾರದಲ್ಲಿಯೂ ನಮಗೆ ಈ ಆಲೋಚನೆಗಳಿಗೆ ಕಾರಣವಿರುತ್ತಿರಲಿಲ್ಲ. ನಮಗೆ ವ್ಯಕ್ತಿದ್ವೇಷವಿಲ್ಲ. ರೋಮಿನ ಸ್ವಾತಂತ್ರ್ಯದ ರಕ್ಷಣೆಗಾಗಿ ನಾವು ಕೆಲಸಮಾಡಬೇಕಲ್ಲದೆ, ಕೊಲೆಯಿಂದ ಸಂತುಷ್ಟರಾಗುವ ಕಟುಕರ ಕೆಲಸವನ್ನು ಮಾಡುವುದು ಉಚಿತವೆ ?"

ಕ್ಯಾಸಿಯಸ್—" ಆದರೂ ಅವನ ವಿಚಾರದಲ್ಲಿ ನನಗೆ ಭಯವುಂಟು. ಅವನಿಗೆ ಸೀಸರ್‌ನಲ್ಲಿ ಪರಮ ಮೈತ್ರಿ."

ಬ್ರೂಟಸ್—" ಅಯ್ಯಾ ಕ್ಯಾಸಿಯುಸ್, ಅವನ ವಿಷಯವನ್ನು ಮರೆತುಬಿಡು. ಅವನಿಗೆ ಸೀಸರ್‌ನಲ್ಲಿ ಪ್ರೀತಿಯಿರುವುದಾದರೆ, ಅವನು

ಮಾಡಬಹುದಾದುದೆಲ್ಲಾ, ತನ್ನ ಸ್ನೇಹಿತನನ್ನು ಸ್ಮರಣೆಮಾಡುತ್ತ ಸಾಯುವುದೊಂದೇ. ಅವನು ಹಾಗೆ ಮಾಡುವುದೂ ಅಸಂಭವ ಅವನು ವಿನೋದ ಪ್ರಿಯನೂ ಜನಗೋಷ್ಠಿಯಲ್ಲಿ ಬೆಳೆದವನೂ ಆಗಿರುವನು.''

ಕ್ಯಾಸಿಯಸ್—'' ಬ್ರೂಟಸ್, ಬೆಳಕು ಹರೆಯುತ್ತ ಬಂತು. ಇನ್ನು ನಾವು ಹೊರಡುವೆವು. ಮಿತ್ರರೇ, ಇನ್ನು ನಾವು ಹೊರಡೋಣ. ಇಂದಿನ ತೀರ್ಮಾನಗಳು ಜ್ಞಾಪಕವಿರಲಿ. ನಾಳೆಯ ದಿನ ಸೆನೆಟ್ ಮಂದಿರಕ್ಕೆ ಸೀಸರನನ್ನು ಬೆಳಿಗ್ಗೆ ಎಂಟು ಗಂಟೆಗೆ ಕರೆತರೋಣ. ರೋಮನರ ಹೆಸರಿಗೆ ಕುಂದಿಷ್ಟೂ ಬಾರದಂತೆ ನಡೆದುಕೊಳ್ಳಿರಿ.''

ಬ್ರೂಟಸ್—''ಮಹನೀಯರೇ, ನೀವು ಶಾಂತರಾಗಿಯೂ, ಸಂತುಷ್ಟ ಚಿತ್ತರಾಗಿಯೂ ಕಾಣುತ್ತಿರಬೇಕು. ನಿಮ್ಮ ಮುಖಭಾವದಿಂದ ಮನೋಭಾವವಾಗಲಿ, ಕಾರ್ಯಾಲೋಚನೆಯಾಗಲಿ, ಹೊರಪಡದಂತಿರಬೇಕು. ನಿಮಗೆ ಸುಪ್ರಭಾತವಾಗಲಿ. ''

ಕ್ಯಾಸಿಯಸ್ ಮೊದಲಾದ ಸಂಚುಗಾರರು ಹೊರಟುಹೋದರು. ಬ್ರೂಟಸ್‌ನು ತನ್ನ ಆಳನ್ನು ಎಬ್ಬಿಸಬೇಕೆಂದು '' ಲ್ಯೂಸಿಯಸ್, ಲ್ಯೂಸಿಯಸ್ !'' ಎಂದು ಎರಡು ತಡವೆ ಕೂಗಿದನು. ಆಳು ಬಾರದಿರಲು, '' ನಿದ್ರೆಯಲ್ಲಿರುವನು. ಚಿಂತೆಯಿಲ್ಲ, ಇರಲಿ; ಅವನೇ ಪುಣ್ಯವಂತ; ಅವನಿಗೆ ಆಲೋಚನೆ ಇಲ್ಲ, ಆತಂಕವಿಲ್ಲ '' ಎಂದುಕೊಂಡನು.

ಈ ವೇಳೆಗೆ ಬ್ರೂಟಸ್‌ನ ಭಾರ್ಯೆಯಾದ ಪೋರ್ಷಿಯಾ ಅಲ್ಲಿಗೆ ಬಂದಳು.

ಬ್ರೂಟಸ್—'' ಪೋರ್ಷಿಯಾ, ಏಕೆ ಇಷ್ಟು ಮುಂದಾಗಿ ಎದ್ದು ಬಂದೆ? ನಡುಗಿಸುತ್ತಿರುವ ಈ ಚಳಿಯು ನಿನ್ನ ದೇಹಸ್ಥಿತಿಗೆ ಸರಿಬೀಳುವುದಿಲ್ಲ.''

ಪೋರ್ಷಿಯಾ—'' ನಿನಗೂ ಸರಿಬೀಳುವುದಿಲ್ಲ ! ಇಂದು ನಿದ್ದೆಯ ಸಮಯದಲ್ಲಿ ನನ್ನನ್ನು ಬಿಟ್ಟು ಹೊರಟುಬಂದೆ. ನಿನ್ನೆ ರಾತ್ರಿ ಭೋಜನದ ಮಧ್ಯದಲ್ಲಿಯೇ ತಟ್ಟನೆ ಹೊರಟುಹೋದೆ. ದೀರ್ಘವಾದ ಆಲೋಚನೆಯಿಂದ ನಿಟ್ಟುಸಿರುಬಿಡುತ್ತ ಕೈಗಳನ್ನು ಕಟ್ಟಿಕೊಂಡು ಸುತ್ತುತ್ತಿದ್ದೆ. ನಿನ್ನ ಮುಖದಲ್ಲಿ ಸಂತೋಷಭಾವವೇ ತೋರುವುದಿಲ್ಲ. ನಿನ್ನ ಖಿನ್ನತೆಗೆ ಕಾರಣ

ವೇನೆಂದು ನಾನು ಕೇಳಲು ಬಿರುಬಿರನೆ ನೋಡಿದೆ. ಒತ್ತಿ ಕೇಳಲು ನೆಲವನ್ನು ಒದೆದೆ. ಮತ್ತೆ ಮತ್ತೆ ಒತ್ತಿ ಕೇಳಲು ಉತ್ತರ ಕೊಡದೆ, ಹೊರಟು ಹೋಗೆಂದು ಸಂಜ್ಞೆಮಾಡಿ ಕಳುಹಿಸಿದೆ. ಉತ್ಕಟವಾಗಿ ತೋರುತ್ತಿದ್ದ ನಿನ್ನ ಮನಸ್ಸಿನ ಸ್ಥಿತಿಯನ್ನು ತಿಳಿದು ನಾನು ಹೊರಟುಹೋದೆ. ಈ ಸ್ಥಿತಿಯು ನಿನ್ನನ್ನು ನಿದ್ರೆಮಾಡಗೊಡಿಸದು, ಊಟಮಾಡಗೊಡಿಸದು, ನಿನ್ನ ರೂಪವನ್ನೇ ಮಾರ್ಪಡಿಸಿರುವುದು. ಇನಿಯಾ, ನಿನ್ನನ್ನು ಗುರುತಿಸುವುದು ನನಗೂ ಪ್ರಯಾಸವಾಗಿದೆ. ನಿನ್ನ ಚಿಂತೆಯ ಕಾರಣವನ್ನು ದಯಮಾಡಿ ಹೇಳು ''

ಬ್ರೂಟಸ್—'' ನಾನು ಆರೋಗ್ಯವಾಗಿಲ್ಲ. ಅಷ್ಟೇ !''

ಪೋರ್ಷಿಯಾ—'' ನನ್ನ ಕಾಂತನು, ಆರೋಗ್ಯವಿಲ್ಲದಿದ್ದರೆ ಅದನ್ನು ಪಡೆದುಕೊಳ್ಳುವ ಮಾರ್ಗವನ್ನು ಕಾಣನೆ ? ''

ಬ್ರೂಟಸ್—''ಆಗಲಿ, ಹಾಗೆ ಮಾಡೋಣ. ಈಗ ನೀನು ಹೋಗು ; ಇನ್ನೂ ಬೆಳಕು ಹರಿದಿಲ್ಲ ; ಮಲಗು ಹೋಗು.''

ಪೋರ್ಷಿಯಾ—'' ಆರೋಗ್ಯವಿಲ್ಲದಿದ್ದರೆ ನಿದ್ರೆಯನ್ನು ಬಿಟ್ಟು ಇಬ್ಬನಿಯಿಂದ ಕೂಡಿದ ಚಳಿಗಾಳಿಗೆ ಮೈಯೊಡ್ಡಿಕೊಂಡು ಓಡಾಡುವುದು ಆರೋಗ್ಯದಾಯಕವೆ ? ಅನಾರೋಗ್ಯವಂತರು ಸೂರ್ಯೋದಯಕ್ಕೆ ಮುಂಚಿತ ವಾಗಿ ವಾಯು ಸೇವನೆಗಾಗಿ ಹೊರಕ್ಕೆ ಹೊರಡುವರೆ ? ನಾಥಾ, ನೀನು ಮಾನಸಿಕವಾದ ಯಾವುದೋ ವ್ಯಾಧಿಯಿಂದ ನರಳುತ್ತಿರುವೆ. ಹೆಂಡತಿ ಯಾದ ನನಗೆ ಅದನ್ನು ತಿಳಿಯುವ ಸ್ವಾತಂತ್ರ್ಯವಿದೆ. ನಿನ್ನ ಹೃದಯ ಭಾರಕ್ಕೆ ಕಾರಣವೇನು ? ಈ ರಾತ್ರಿ ಕತ್ತಲೆಗೂ ಗೊತ್ತಾಗಬಾರದೆಂದು ಮುಸುಕಿಟ್ಟುಕೊಂಡು ಬಂದಿದ್ದ ಆರೇಳು ಮಂದಿಯು ಯಾರು ? ನಿನ್ನ ಚರಣಗಳಿಗೆ ಎರಗುವೆನು. ನಿನ್ನ ಚಿಂತೆಯೇನು ? ದಯಮಾಡಿ ಹೇಳು '' ಎಂದು ನಮಸ್ಕರಿಸಿದಳು.

ಬ್ರೂಟಸ್—'' ಇದೇಕೆ ? ನಮಸ್ಕರಿಸದಿರು ! ಏಳು ! ''

ಪೋರ್ಷಿಯಾ—'' ನಾಥನೇ, ನೀನು ಸರಳವಾದ ರೀತಿಯಲ್ಲಿದ್ದಿದ್ದರೆ, ನಾನು ಇಷ್ಟು ದೀನಳಾಗಿ ನಮಸ್ಕರಿಸಬೇಕೆ ? ಇಷ್ಟು ಬೇಡಬೇಕೆ ? ಇಷ್ಟು

ಕಾಡಬೇಕೆ? ನಮ್ಮ ದಾಂಪತ್ಯಧರ್ಮದ ಮೇಲೆ ದೃಷ್ಟಿಯಿಟ್ಟು ಹೇಳು. ಹೆಂಡತಿಗೆ ತಿಳಿಯಗೊಡದಿರಬೇಕಾದ ಗುಟ್ಟಿನ ವಿಚಾರಗಳೇನಾದರೂ ಉಂಟೆ? ನಾನು ನಿನ್ನ ಸಹಧರ್ಮಿಣಿಯಲ್ಲವೆ? ಪತ್ನಿ ಎನ್ನಿಸಿಕೊಂಡೂ ಎಷ್ಟೋ ಅಷ್ಟರಲ್ಲಿರಬೇಕೆ?"

ಬ್ರೂಟಸ್—"ನೀನು ನನ್ನ ಸತಿ; ಗುಣವತಿ; ನನ್ನ ದೇಹಾರ್ಧ. ವ್ಯಾಕುಲಗೊಂಡ ನನ್ನ ಹೃದಯಕ್ಕೆ ಆಪ್ಯಾಯನ. ಪ್ರಿಯೆ, ಖತಿಗೊಳ್ಳದಿರು."

ಪೋರ್ಷಿಯಾ—"ಇದು ನಿಜವಾದರೆ, ನಾನು ನಿನ್ನ ಅಂತರ್ಯ ವನ್ನು ತಿಳಿಯಲೇಬೇಕು. ನಾನು ಹೆಂಗಸೇ ಅಹುದು. ಆದರೆ ಬ್ರೂಟಸ್‌ನು ವರಿಸಿದವಳು ವಿಖ್ಯಾತನಾಮಧೇಯನಾದ ಕೇಟೋವಿನ ಪುತ್ರಿ. ಅಂತಹ ತಂದೆಯ ಮಗಳೂ, ಇಂತಹ ಭರ್ತೃವಿನ ಭಾರ್ಯೆಯೂ ಆಗಿ ನನಗೆ ಧೈರ್ಯವಿಲ್ಲವೆಂದು ತಿಳಿದೆಯಾ? ನಿನ್ನ ಆಲೋಚನೆಗಳನ್ನು ನನಗೆ ಹೇಳು. ನಾನು ಅವುಗಳನ್ನು ನನ್ನ ಅಂತರಂಗದಲ್ಲಿಡುವೆನು. ಇದೋ ನೋಡು. ಈ ತೊಡೆಯಲ್ಲಿ ಬಲವಾದ ಗಾಯವನ್ನು ಮಾಡಿಕೊಂಡಿರುವೆನು. ಇದನ್ನು ಶಾಂತಳಾಗಿಯೇ ತಾಳಿಕೊಳ್ಳುತ್ತಿರುವೆನು. ನನ್ನ ಸ್ಥೈರ್ಯವಿಚಾರದಲ್ಲಿ ನಿದರ್ಶನವು ಸಾಕೆ? ಹಾಗಾದರೆ ನಿನ್ನ ಗುಟ್ಟನ್ನು ಭದ್ರಪಡಿಸಲಾರೆನೆ?"

ಬ್ರೂಟಸ್—"ಹಾ! ದೇವದೇವನೆ! ಈ ಗುಣವತಿಯಾದ ಭಾರ್ಯೆಗೆ ನನ್ನನ್ನು ತಕ್ಕ ಭರ್ತೃವಾಗಿ ಮಾಡು!"

ಈ ವೇಳೆಗೆ ಬಾಗಿಲು ತಟ್ಟಿದ ಶಬ್ದವಾಯಿತು

ಬ್ರೂಟಸ್—"ಅಗೋ, ಯಾರೋ ಬಾಗಿಲನ್ನು ತಟ್ಟುವರು. ಸ್ವಲ್ಪಕಾಲ ಒಳಕ್ಕೆ ಹೋಗಿರು. ಕಾಲಕ್ರಮದಲ್ಲಿ ಸಮಸ್ತ ವಿಚಾರ ವನ್ನೂ ತಿಳಿಸುವೆನು. ನನ್ನ ವ್ಯಸನಕಾರಣವನ್ನೂ ತಿಳಿಸುವೆನು. ಸದ್ಯಕ್ಕೆ ಹೋಗಿರು.'

ಪೋರ್ಷಿಯಾ ಹೊರಟುಹೋದಳು. ಸಂಚುಗಾರರಲ್ಲಿ ಒಬ್ಬನು ಒಳಕ್ಕೆ ಬಂದನು. ಮುಂದಿನ ಕಾರ್ಯಕ್ರಮಗಳನ್ನು ಕುರಿತು ಅವರಿಬ್ಬರೂ ಯೋಚಿಸುತ್ತಿದ್ದರು.

ಇತ್ತ ಸೀಸರ್‌ನ ಮನೆಯಲ್ಲಿ ಆ ರಾತ್ರಿ ಆತನ ಹೆಂಡತಿಯು ನಿದ್ರೆಯಲ್ಲಿ

ಕನವರಿಸುತ್ತ, "ಅಯ್ಯೋ, ಸಹಾಯಮಾಡಿ! ಸೀಸರ್‌ನನ್ನು ಅವರು ಕೊಲೆಮಾಡುವರು" ಎಂದು ಮೂರು ತಡವೆ ಕೂಗಿಕೊಂಡಳು.

ಸೀಸರನೂ ಕಳವಳಗೊಂಡು ದೇವರಿಗೆ ಪೂಜೆ ನೈವೇದ್ಯ ಬಲಿಗಳನ್ನು ಸಮರ್ಪಣೆಮಾಡಿಸಿ, "ಭವಿಷ್ಯ ವಿಚಾರದಲ್ಲಿ ಪುರೋಹಿತರು ಏನು ಹೇಳುವರು ತಿಳಿದು ಬಾ," ಎಂದು ಒಬ್ಬ ಆಳನ್ನು ಕಳುಹಿಸಿ ತಾನು ಹೊರಕ್ಕೆ ಹೊರಡಲು ಅನುವಾಗುತ್ತಿದ್ದನು. ಸೀಸರ್‌ನ ಭಾರ್ಯೆಯು, "ಕಾಂತನೇ, ಆದರೂ ಹೊರಡುವೆಯಾ? ಇಂದು ನೀನು ಮನೆಯಿಂದ ಆಚೆಗೆ ಹೋಗಕೂಡದು" ಎಂದಳು.

ಸೀಸರ್—"ಏಕೆ ಭಯಭ್ರಾಂತಳಾಗುವೆ? ನನಗೆ ಭಯವುಂಟೆ? ಭಯಕ್ಕೆ ಕಾರಣವೇನು? ಭಯಕ್ಕೆ ನಾನು ಭಯಪ್ರದನಾಗಿರುವೆನು!"

ಕ್ಯಾಲ್ಫರ್ನಿಯಾ—"ನಾನು ಶಕುನವೇ ಮೊದಲಾದವುಗಳನ್ನು ಲಕ್ಷ್ಯಮಾಡುವವಳಲ್ಲ. ಆದರೂ ಈಗ ನಾನು ಭಯಪಡುತ್ತಿರುವೆನು. ಇಷ್ಟು ಮಾತ್ರವೇ ಅಲ್ಲದೆ ನಾನು ಕಂಡು ಕೇಳಿದ ವಿಷಯಗಳೂ ನನಗೆ ಭಯವನ್ನುಂಟುಮಾಡುತ್ತಿವೆ. ಕಾವಲಿದ್ದವರು ಭಯಂಕರಾಕಾರಗಳನ್ನು ಕಂಡೆವೆಂದು ಹೇಳುವರು. ಒಂದು ಹೆಣ್ಣು ಸಿಂಹವು ನಗರದ ಬೀದಿಯಲ್ಲಿ ಮರಿ ಹಾಕಿತಂತೆ. ಸಮಾಧಿಗಳು ಬಾಯಿ ತೆರೆದುವಂತೆ. ಬೆಂಕಿಯಾಕಾರದ ಭಯಂಕರ ಯೋಧರು ಅಂತರಿಕ್ಷದಲ್ಲಿ ಕಡಿದಾಡಿದರಂತೆ; ಆ ಯುದ್ಧದಲ್ಲಿ ಗಾಯಪಟ್ಟ ಯೋಧರ ರಕ್ತವು ಈ ನಗರದ ಮೇಲೆ ಸುರಿಯಿತಂತೆ; ಆ ಯುದ್ಧದ ಗದ್ದಲವೂ ಅವರ ಕುದುರೆಗಳ ಹೇಷಾರವವೂ ಮರಣಸಂಕಟದ ಆರ್ತಧ್ವನಿಯೂ ಕೇಳಿ ಬಂದುವಂತೆ."

ಸೀಸರ್—"ಸರ್ವಶಕ್ತನಾದ ಭಗವಂತನ ಸಂಕಲ್ಪವು ಬೇರೆಯಾಗುವುದುಂಟೆ? ಅದಕ್ಕೆ ಯಾರಾದರೂ ಪ್ರತಿಯೊಡ್ಡಬಲ್ಲರೇ? ನಾನು ಹೊರಟೇ ಹೊರಡುವೆನು. ಈ ಅಪಶಕುನಗಳು ಲೋಕಕ್ಕೆಲ್ಲಾ ಎಷ್ಟು ಮಟ್ಟಿಗೋ ನನಗೂ ಅಷ್ಟೇ."

ಕ್ಯಾಲ್ಫರ್ನಿಯಾ—"ನಾಥನೇ, ಭಿಕ್ಷುಕರು ಸಾಯುವಾಗ್ಗೆ ಧೂಮಕೇತುಗಳೇ ಮೊದಲಾದ ಉತ್ಪಾತಗಳು ಕಾಣಬರುವುದಿಲ್ಲ. ಆದರೆ

ರಾಜಾಧಿರಾಜರು ಮೃತರಾಗುವ ಸಂದರ್ಭದಲ್ಲಿ ಮುಂದಾಗಿಯೇ ಕಾಣ ಬರುವುವು.''

ಸೀಸರ್—'' ಧೀರರು ಸಾಯುವುದು ಒಂದೇ ಸಲ. ಹೇಡಿಗಳು ಸ್ವಾಭಾವಿಕವಾದ ಸಾವು ಬರುವುದಕ್ಕೆ ಮುಂದಾಗಿಯೇ ಅನೇಕ ತಡವೆ ಸಾಯುವರು. ಪ್ರತಿ ಪ್ರಾಣಿಗೂ ಮರಣವು ಪ್ರಾಪ್ತವಾಗಲೇಬೇಕು. ಅದು ಎಂದು ಒರಬೇಕೋ ಅಂದು ಒಂದೇ ಬರುವುದು. ಈ ವಿಚಾರದಲ್ಲಿ ಜನರೇಕೆ ಅಂಜುವರೆಂಬುದೇ ನನಗೆ ಆಶ್ಚರ್ಯ !''

ಈ ವೇಳೆಗೆ, ಪುರೋಹಿತನ ಬಳಿಗೆ ಹೋಗಿದ್ದ ಆಳು ಹಿಂತಿರುಗಿ ಬಂದು, '' ಸ್ವಾಮಿ, ತಾವು ಈ ದಿನ ಮನೆಯಿಂದ ಹೊರಕ್ಕೆ ಹೊರಡದಿರ ಬೇಕೆಂದು ಅವರು ಹೇಳಿರುವರು. ಬಲಿಗಾಗಿ ಸಮರ್ಪಿಸಲ್ಪಟ್ಟ ಪ್ರಾಣಿಗಳಲ್ಲಿ ಒಂದಕ್ಕೆ ಹೃದಯವೇ ಕಾಣಲಿಲ್ಲ'' ಎಂದನು.

ಸೀಸರ್—'' ತನ್ನ ಕರ್ತವ್ಯವನ್ನು ತಾನು ಮಾಡದಿರುವ ಮನು ಷ್ಯನು ಹೃದಯವಿಲ್ಲದ ಮೃಗಕ್ಕೆ ಸಮನೆಂದು ಹೇಡಿಗಳನ್ನು ನಾಚಿಕೆ ಗೊಳಿಸುವುದಕ್ಕಾಗಿ ದೇವರು ಇಂತು ಮಾಡಿದನು. ಇವೊತ್ತು ನಾನು ಭಯದಿಂದ ಮನೆಯಲ್ಲಿ ನಿಂತರೆ, ಹೃದಯವಿಲ್ಲದ ಮೃಗವೇ ಸರಿ. ಛಿ ! ಛಿ ! ಸೀಸರನು ಅಂಥವನಲ್ಲ.''

ಕ್ಯಾಲ್ಫರ್ನಿಯಾ—'' ಅಯ್ಯೋ ! ಸೀಸರ್, ನಿನ್ನ ಪ್ರಬಲತರವಾದ ಈ ನಂಬಿಕೆಯಲ್ಲಿ ನಿನ್ನ ಪ್ರತಿಜ್ಞೆಯು ಅಡಗಿಹೋಯಿತೆ? ದಯಮಾಡಿ ಈ ದಿನ ಮನೆಯಿಂದಾಚೆಗೆ ಹೊರಡದಿರು. ನಿನ್ನನ್ನು ಮನೆಯಲ್ಲಿ ನಿಲ್ಲಿಸಿದುದು ಭಾರ್ಯೆಯ ಭೀರುತನವೆಂದು ಹೇಳು. ಸೆನೆಟ್ ಮಂದಿರಕ್ಕೆ ಮಹನೀಯ ನಾದ ಆನ್‌ಟೊನಿಯನ್ನು ಕಳುಹಿಸು. ನಮಸ್ಕರಿಸುವೆನು. ಬೇಡಿಕೊಳ್ಳುವೆನು. ನನ್ನ ಮಾತನ್ನು ನಡೆಯಿಸಿಕೊಡು. ಆತನು ಹೋಗಿ ನಿನಗೆ ದೇಹದಲ್ಲಿ ಸ್ವಸ್ಥವಿಲ್ಲವೆಂದು ಹೇಳಲಿ.''

ಸೀಸರ್—'' ಒಳ್ಳೆಯದು. ಆನ್‌ಟೊನಿಯು ಹೋಗಿ ನನಗೆ ಸ್ವಸ್ಥ ವಿಲ್ಲವೆಂದು ಹೇಳಲಿ. ನಾನು ನಿನ್ನ ಪ್ರೀತ್ಯರ್ಥವಾಗಿ ಇಂದು ಮನೆಯಲ್ಲಿ ನಿಲ್ಲುವೆನು '' ಎಂದು ಒಪ್ಪಿಕೊಂಡನು.

ಈ ವೇಳೆಗೆ ಬೆಳಗಾಗಿ ಬಹಳ ಹೊತ್ತಾಗಿತ್ತು. ಸಂಚುಗಾರರಲ್ಲಿ ಒಬ್ಬನು ಬಂದು, ಸೀಸರನು ಬರಲಾರದುದಕ್ಕೆ ಕಾರಣವನ್ನು ತಿಳಿದು, ಅವನನ್ನು ಅವಹೇಳನಮಾಡಿ, ಸೀಸರನಿಗೆ ಕಿರೀಟವನ್ನು ಒಪ್ಪಿಸುವುದಕ್ಕಾಗಿ ಸೆನೆಟ್ ಮಂದಿರದಲ್ಲಿ ಸಭೆಸೇರಿರುವುದೆಂದು ಹೇಳಿದನು. ಸೀಸರನು "ಶಕುನ ಕಣಗಳನ್ನು ಹೇಳುವ ಪುರೋಹಿತರ ಮಾತನ್ನು ನಂಬಿ ಭ್ರಾಂತನಾಗಿದ್ದೆನು ಕಾಂತೆ, ನೋಡಿದೆಯಾ! ಅಭ್ಯುದಯಕಾಲವನ್ನು ಅಪಾಯಕಾಲವೆಂದು ತಪ್ಪಾಗಿ ತಿಳಿದುಬಿಟ್ಟೆವಲ್ಲಾ! ನನ್ನ ಉಡಿಗೆಯನ್ನು ಕೊಡು. ಹೊರಡು ವೆನು" ಎಂದು ಉಡಿಗೆ ತೊಡಿಗೆಗಳನ್ನು ಹಾಕಿಕೊಂಡು ಹೊರಟನು. ಸೆನೆಟ್ ಮಂದಿರಕ್ಕೆ ಹೊರಟಿರುವ ಸೀಸರನ ಉತ್ಸವವನ್ನು ನೋಡಲು ಬೀದಿಗಳ ಎರಡು ಸಾಲುಗಳಲ್ಲಿಯೂ ಜನರು ಒತ್ತಾಗಿ ನಿಂತಿದ್ದರು. ಇಂತಹ ಬೀದಿಗಳ ಒಂದು ಕಿರಿದಾದ ಸ್ಥಳದಲ್ಲಿ ಒಬ್ಬ ಕಾವ್ಯಾಲಂಕಾರ ಪಂಡಿತನು ಒಂದು ಕಾಗದವನ್ನು ಹಿಡಿದುಕೊಂಡು ಅದನ್ನು ಸೀಸರ್‌ಗೆ ಕೊಡಬೇಕೆಂದು ಹವಣಿಸುತ್ತಿದ್ದನು. ಅದರಲ್ಲಿ ಅವನಿಗೆ ಎಚ್ಚರಿಕೆ ಕೊಟ್ಟಿತ್ತು. ಸೀಸರನು ಆ ಸ್ಥಳಕ್ಕೆ ಬಂದ ಕೂಡಲೆ ಪಂಡಿತನು ಅರ್ಜಿಕೊಡುವವನಂತೆ ಆ ಕಾಗದವನ್ನು ಒಪ್ಪಿಸುವುದಕ್ಕೆ ಹೋದನು.

ಸೀಸರ್—"ಸಭಾಮಂದಿರಕ್ಕೆ ಬಂದು ದೂರುಗಳನ್ನು ಹೇಳಿಕೊಳ್ಳ ಬಹುದು. ಇಲ್ಲಿಯೇ ಏಕೆ ಆತುರಪಡುತ್ತೀಯೆ?"

ಪಂಡಿತ—"ಅಯ್ಯಾ ಮಹನೀಯನೇ, ಇದು ನಿನ್ನ ಸ್ವಂತಕ್ಕೆ ಸಂಬಂಧಪಡುವ ವಿಷಯ."

ಸೀಸರ್—"ಹಾಗಾದರೆ ಆತುರವಿಲ್ಲ, ನಿದಾನವಾಗಿ ನೋಡು ವೆನು" ಎಂದು ಹೇಳಿ ಅದನ್ನು ತೆಗೆದು ಇಟ್ಟುಕೊಂಡನು.

ಸೆನೆಟ್ ಮಂದಿರವು ಬಂತು. ಅಲ್ಲಿ ಮೊದಲೇ ಗೊತ್ತಾಗಿದ್ದಂತೆ ಒಬ್ಬನು ಸೀಸರನ ಮಿತ್ರನಾಗಿದ್ದ ಆನ್‌ಟೊನಿಯನ್ನು ಕರೆದುಕೊಂಡು ಹೋದನು. ಆಮೇಲೆ ಮೆಟಿಲಸ್ ಸಿಂಬರನು ಗಡೀಪಾರಾದ ತನ್ನ ತಮ್ಮ ನನ್ನು ಕ್ಷಮಿಸುವಂತೆ ಸೀಸರ್‌ನನ್ನು ಮೊಣಕಾಲೂರಿ ಕುಳಿತು ದೈನ್ಯದಿಂದ ಪ್ರಾರ್ಥಿಸಿಕೊಳ್ಳಲು, ಸೀಸರನು ಕಡುಖಂಡಿತವಾಗಿ ಅವನ ಪ್ರಾರ್ಥನೆಗಳನ್ನು

ತಿರಸ್ಕರಿಸಿದನು. ಆ ಪ್ರಾರ್ಥನೆಯನ್ನು ನಡೆಸಿಕೊಡೆಂದು ಬ್ರೂಟಸ್‌ನೂ ಹೇಳಿದನು, ಕ್ಯಾಸಿಯಸ್‌ನೂ ಹೇಳಿದನು. ಯಾರ ಮಾತೂ ನಡೆಯಲಿಲ್ಲ. ಆಗ ಕ್ಯಾಸ್ಕನು, ಹಾಗಾದರೆ "ನನ್ನ ಪರವಾಗಿ ನನ್ನ ಕೈಗಳು ಮಾತನಾಡಲಿ" ಎಂದು ಸೀಸರನನ್ನು ಹಿಂದಿನಿಂದ ಇರಿದನು. ಆಮೇಲೆ ಇತರ ಸಂಚುಗಾರರೂ, ಕೊನೆಗೆ ಬ್ರೂಟಸ್ಸನೂ ತಮ್ಮ ತಮ್ಮ ಬಾಕುಗಳಿಂದ ಎಡೆಬಿಡದಂತೆ ಇರಿದರು. ಸೀಸರನೂ ಬ್ರೂಟಸ್‌ನ ಏಟು ಬೀಳುವ ಪರ್ಯಂತವೂ ಪ್ರಾಣಸಂರಕ್ಷಣೆ ಮಾಡಿಕೊಳ್ಳಲು ಹೋರಾಡುತ್ತ, ಹೆಣಗುತ್ತಿದ್ದನು. ಬ್ರೂಟಸ್‌ನ ಕೈ ನೋಡುತ್ತಲೇ, "ಏನು! ಬ್ರೂಟಸ್! ನೀನೂ—!!" ಎಂದು ಹತಾಶನಾಗಿ ಮುಖದ ಮೇಲೆ ಬಟ್ಟೆಯನ್ನು ಹಾಕಿಕೊಂಡು ಕೆಳಗೆ ಬಿದ್ದನು. ಮೈಮೇಲೆಲ್ಲಾ ಬಹು ಬಲವಾದ ಹಲವು ಗಾಯಗಳಾಗಿದ್ದುದರಿಂದ ರಕ್ತ ಸುರಿಯುತ್ತ, ಪಾಂಪೆಯ ಪ್ರತಿಮೆಯ ಹತ್ತಿರ ಬಿದ್ದು ಮೃತನಾದನು.

"ಸ್ವಾತಂತ್ರ್ಯವು ಸಿಕ್ಕಿತು! ಪರಾಧೀನವು ತಪ್ಪಿತು!" ಎಂದು ಸಂಚುಗಾರರು ಕೂಗಿಕೊಂಡರು. ಆ ವೇಳೆಗೆ ಸಭಾಮಂದಿರವು ಬರಿದಾಗಿತ್ತು. ಸಭಿಕರು ಭೀತರಾಗಿ ಹೊರಟುಹೋಗಿದ್ದರು. ಸೀಸರ್‌ನನ್ನು ಘಾತಿಸಿದ್ದು ಬಹು ಅನಿರೀಕ್ಷಿತವಾಗಿದ್ದದ್ದರಿಂದ ಈ ಒಳಸಂಚಿಗೆ ಸೇರಿದವರಾರು, ಸೇರದವರಾರು, ಎಂಬುದೇ ಇತರರಿಗೆ ತಿಳಿಯದು. ಕೊಲೆ ಎಂಬ ಕೂಗಿನಿಂದಲೂ, ರಕ್ತಕಲೆಯಿಂದ ಕೂಡಿದ ಆಯುಧಪಾಣಿಗಳನ್ನು ನೋಡಿದುದರಿಂದಲೂ, ಜನರು ಭಯಭ್ರಾಂತರಾಗಿದ್ದರು. ಆದರೆ ಪ್ರಜಾಸಾಮಾನ್ಯದಲ್ಲಿ ಗಣ್ಯತೆಯನ್ನು ಹೊಂದಿದ್ದ ಬ್ರೂಟಸ್ ಮತ್ತು ಕ್ಯಾಸಿಯಸ್‌ರನ್ನು ನೋಡುತ್ತಲೇ ಅವರಿಗೆ ಭೀತಿಯು ಸ್ವಲ್ಪ ಮಟ್ಟಿಗೆ ಶಮನವಾಯಿತು.

ಇದುವರೆಗೆ ಅಡಗಿಕೊಂಡಿದ್ದ ಆನ್‌ಟೊನಿಯು ಈಗ ಬ್ರೂಟಸ್‌ನು ಹೇಳಿ ಕಳುಹಿಸಿದ ಭರವಸೆಯ ಮೇಲೆ ಅಲ್ಲಿಗೆ ಬಂದನು. ಸೀಸರನ ಕಳೇಬರವು ಇನ್ನೂ ಅಲ್ಲಿಯೇ ಬಿದ್ದಿತ್ತು. ಅದರ ಸುತ್ತಲೂ ಬ್ರೂಟಸ್‌ನೇ ಮೊದಲಾದವರು ನಿಂತಿದ್ದರು. ಅವರ ಕೈಗಳೂ, ಬಾಕುಗಳೂ, ಉಡುಪೂ

ಸೀಸರ್‌ನ ರಕ್ತದಿಂದ ಕೆಂಬಣ್ಣವಾಗಿದ್ದುವು. ಅವರ ಮುಖಗಳಲ್ಲಿ ಉದ್ವೇಗವು ತೋರುತ್ತಿತ್ತು. ಆನ್‌ಟೊನಿಯು ಅವರನ್ನು ದಿಟ್ಟಿಸಿದನು. ಆದರೆ ಅವನ ಅಂತಃಕರಣವೆಲ್ಲವೂ ಅಲ್ಲಿ ಶಿಲೆಯ ಮೇಲೆ ಬಿದ್ದಿದ್ದ ಆ ನಿರ್ಭಾಗ್ಯ ಸೀಸರನ ಛಿದ್ರಛಿದ್ರವಾದ ದೇಹದಲ್ಲಿತ್ತು. ಆದ್ದರಿಂದ ಅವನು ಮತ್ತಾರನ್ನೂ ಲಕ್ಷಿಸದೆ ಆ ಶವದ ಸಮೀಪದಲ್ಲಿ ಮಂಡಿಯೂರಿ ಕುಳಿತುಕೊಂಡು, ಸೀಸರ್‌ನ ಮೈ ಕೈ ಮೇಲಿನ ಗಾಯಗಳನ್ನು ನೋಡುತ್ತ, ಅವನ ತಲೆಯನ್ನು ತಡವುತ್ತ, "ಆಹಾ! ಅದ್ವಿತೀಯಪರಾಕ್ರಮಶಾಲಿಯಾದ ಸೀಸರ್‌ನೇ, ಶತ್ರು ಹೃದಯ ಭಯಂಕರನಾದ ಸೀಸರ್‌ನೇ, ನೀನೂ ಇಲ್ಲಿ ಇಂತು ಬಿದ್ದುಬಿಟ್ಟೆಯಾ? ನಿನ್ನ ದಿಗ್ವಿಜಯಗಳೂ ಖ್ಯಾತಿಯೂ ಪರಾಕ್ರಮವೂ ಈ ರೀತಿ ಪರಿಣಮಿಸಿದುವೇ?" ಎಂದು ಕೆಲವು ಕಾಲ ಶೋಕಿಸಿದನು.

ಅನಂತರ ಸುತ್ತಲೂ ಇದ್ದ ಬ್ರೂಟಸ್ ಮೊದಲಾದವರನ್ನು ಕುರಿತು "ಮಹನೀಯರೇ, ನಿಮ್ಮ ಅಭಿಪ್ರಾಯ ತಿಳಿಯಲಿಲ್ಲ. ಇನ್ನೂ ಯಾರ ರಕ್ತಪಾತವಾಗಬೇಕಾಗಿದೆ? ನಾನು ಬಲಿಯಾಗಬೇಕಾಗಿರುವ ಭಾಗದಲ್ಲಿ ಸೀಸರನು ಮೃತನಾದ ಗಳಿಗೆಯೇ ನನಗೂ ಶುಭಮುಹೂರ್ತವೆಂದು ಸಿದ್ಧನಾಗಿರುವೆನು. ಈ ಪ್ರಪಂಚದಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ರಕ್ತದಿಂದ ಲಿಪ್ತವಾಗಿ ಧನ್ಯಗಳೂ ಮಾನ್ಯಗಳೂ ಆಗಿರುವ ನಿಮ್ಮ ಆಯುಧಗಳಿಗಿಂತ ಉತ್ತಮವಾದ ಆಯುಧಗಳು ಬೇರೆ ಎಲ್ಲಿಯೂ ಇಲ್ಲ. ನಿಮ್ಮನ್ನು ಬೇಡಿಕೊಳ್ಳುವೆನು. ನಾನು ನಿಮಗೆ ಭಾರವಾಗಿದ್ದರೆ, ರಕ್ತಲಿಪ್ತವಾದ ನಿಮ್ಮ ಕೈಗಳ ವೇಗವು ಅಡಗುವುದಕ್ಕೆ ಮುಂಚಿತವಾಗಿಯೇ, ಆ ರಕ್ತದ ಶಾಖವು ತಣ್ಣಗಾಗುವುದಕ್ಕೆ ಮುಂಚಿತವಾಗಿಯೇ, ನಿಮ್ಮ ಇಚ್ಛಾಪೂರ್ತಿಯನ್ನು ಮಾಡಿಕೊಳ್ಳಿರಿ. ಸಹಸ್ರಾರುವರ್ಷ ಬದುಕಿರಿ. ನನಗಂತೂ ಸಾಯಲು ಅಭಿಪ್ರಾಯವಿದೆ. ಕಾಲನಿಯಾಮಕರಾಗಿಯೂ, ಕಾಲಕ್ಕೆ ಕರ್ತೃಗಳಾಗಿಯೂ ಇರುವ ನಿಮ್ಮ ಕೈಗಳಿಂದಲೇ, ಇಲ್ಲಿಯೇ, ಈಗಲೇ, ಸೀಸರನ ಬಳಿಯಲ್ಲಿಯೇ ಸಾಯುವುದು ನನಗೆ ಪರಮಾನಂದವಾಗಿದೆ" ಎಂದನು.

ಬ್ರೂಟಸ್—"ಓ! ಆನ್‌ಟೊನಿ, ನಮ್ಮಲ್ಲಿ ನಿನ್ನ ಮರಣಭಿಕ್ಷೆಯನ್ನು ಬೇಡಬೇಡ. ನೀನು ನಮ್ಮ ಕೈಗಳನ್ನು ನೋಡುತ್ತಿದ್ದೀಯೆ, ನಮ್ಮ ಹೃದಯವನ್ನು ನೋಡುತ್ತಿಲ್ಲ. ನಮ್ಮ ಹೃದಯವು ಅತ್ಯಂತ ಕನಿಕರಯುಕ್ತವಾಗಿದೆ."

ಆನ್‌ಟೊನಿ—"ನಿಮ್ಮ ವಿವೇಕವಿಚಾರದಲ್ಲಿ ನನಗೆ ಸ್ವಲ್ಪವಾದರೂ ತಪ್ಪು ಅಭಿಪ್ರಾಯವಾಗಲಿ ಸಂದೇಹವಾಗಲಿ ಇಲ್ಲ. ನೀವೆಲ್ಲರೂ ನಿಮ್ಮ ಕೈಗಳನ್ನು ಕೊಡಿ. ನಿಮ್ಮ ಕೈಗಳನ್ನು ವಿಶ್ವಾಸದಿಂದ ಹಿಡಿದುಕೊಳ್ಳುವೆನು ಅಯ್ಯೋ! ಏನು ಹೇಳಲಿ! ನನ್ನ ಸ್ನೇಹವು ನಿರಾಧಾರವಾಯಿತು! ಇಂದು ನೀವು ನನ್ನನ್ನು ಹೇಡಿಯೆನ್ನಬಹುದು, ಹೊಗಳುಭಟನೆನ್ನಬಹುದು. ಸೀಸರ್! ನಿನ್ನ ಗೆಳೆಯನಾದ ನಾನು ನಿನ್ನ ಶತ್ರುಗಳಲ್ಲಿ ಸ್ನೇಹ ಸಂಧಿಗಳನ್ನು ಬಯಸುತ್ತಲೂ, ನಿನ್ನನ್ನು ಕೊಂದ ಆ ಕೈಗಳನ್ನು, ಇನ್ನೂ ನಿನ್ನ ರಕ್ತದಿಂದ ತೇವವಾಗಿರುವಾಗಲೇ, ಪರಿಗ್ರಹಿಸುತ್ತಲೂ ಇರುವುದನ್ನು ನಿನ್ನ ಜೀವವು ನೋಡಿ ಮರಣಕ್ಕಿಂತಲೂ ಕಠಿಣವಾದ ಯಾತನೆಯನ್ನು ಅನುಭವಿಸುವುದಲ್ಲವೇ! ಅಯ್ಯೋ ಸೀಸರ್! ಹಲವು ರಾಜರು ಸೇರಿ ಬೇಟೆಯಲ್ಲಿ ಕೊಂದ ಸಾರಂಗದಂತೆ ಮೃತನಾಗಿ ಬಿದ್ದಿರುವೆಯಲ್ಲಾ!"

ಕ್ಯಾಸಿಯಸ್—"ಆನ್‌ಟೊನಿ!"

ಆನ್‌ಟೊನಿ—"ಕ್ಯಾಸಿಯಸ್, ಮನ್ನಿಸು. ಸೀಸರನ ಹಗೆಗಳೂ ಈ ಮಾತುಗಳನ್ನು ಆಡುವರು; ಅಂಥದರಲ್ಲಿ ಸ್ನೇಹಿತನು ಆಡುವುದೇನು ದೊಡ್ಡದು?"

ಕ್ಯಾಸಿಯಸ್—"ನೀನು ಸೀಸರನನ್ನು ಹೊಗಳಿದುದಕ್ಕಾಗಿ ನಾನು ನಿನ್ನನ್ನು ನಿಂದಿಸೆನು. ನೀನು ನಮ್ಮ ಸ್ನೇಹಿತನೇ? ಅಥವಾ ಬೇರೆಯೇ?"

ಆನ್‌ಟೊನಿ—"ನಾನು ನಿಮ್ಮ ಸ್ನೇಹಿತನೇ ಅಹುದು; ಆದುದರಿಂದಲೇ ನಿಮ್ಮ ಕೈಗಳನ್ನು ಹಿಡಿದುಕೊಂಡೆನು. ಸೀಸರನ ಕಳೇಬರವನ್ನು ನೋಡುತ್ತಲೇ ಉದ್ವೇಗವುಂಟಾಯಿತು. ನಿಮ್ಮನ್ನು ಪ್ರೀತಿಸುವೆನು; ನೀವು ಈ ಭರವಸೆಯನ್ನು ಇಟ್ಟುಕೊಂಡು ಸೀಸರನು ಹೇಗೆ ಪ್ರಮಾದಕಾರಿಯಾದನೆಂಬುದನ್ನು ದಯಮಾಡಿ ತಿಳಿಸುವಿರಾ?"

ಬ್ರೂಟಸ್—“ಆಹಾ! ಅವಶ್ಯವಾಗಿ ತಿಳಿಸುವೆವು. ಇದಕ್ಕೆ ಸಮರ್ಪಕವಾದ ಕಾರಣವನ್ನು ನಾವು ತಿಳಿಸದಿದ್ದರೆ ಈ ಕೆಲಸವು ಕಟುಕತನವಾದೀತು! ನೀನು ಸೀಸರನ ಮಗನೇ ಆಗಿದ್ದರೂ ನಾವು ಹೇಳುವ ಕಾರಣಗಳನ್ನು ಸರಿಯೆಂದೂ ನಮ್ಮ ಕಾರ್ಯವು ಉಚಿತವೆಂದೂ ಒಪ್ಪಿಕೊಳ್ಳುವೆ.”

ಆನ್‌ಟೊನಿ—“ಹಾಗಾದರೆ ಸರಿ. ಈ ಕಳೇಬರವನ್ನು ಪೇಟೆಯ ಚೌಕಕ್ಕೆ ತೆಗೆದುಕೊಂಡು ಹೋಗಿ, ಅಪರಕರ್ಮಗಳು ನಡೆಯುವ ವೇಳೆಯಲ್ಲಿ ಮಿತ್ರನಿಗೆ ಉಚಿತವಾದ ರೀತಿಯಲ್ಲಿ ಸೀಸರನ ವಿಚಾರವಾಗಿ ನಾಲ್ಕಾರು ಮಾತುಗಳನ್ನು ಆಡುವೆನು. ಇಷ್ಟಕ್ಕೆ ಅವಕಾಶಕೊಡಿ. ನಾನಿನ್ನೇನೂ ಕೇಳುವುದಿಲ್ಲ.”

ಬ್ರೂಟಸ್—“ಹಾಗೆಯೇ ಆಗಲಿ. ನಾನು ಮಾತನಾಡಿದ ಮೇಲೆ ನೀನು ಮಾತನಾಡಬಹುದು. ಇದಕ್ಕೆ ನಮ್ಮ ಅನುಮತಿಯುಂಟು.”

ಬ್ರೂಟಸ್‌ನ ಈ ಅಭಿಪ್ರಾಯಕ್ಕೆ ಕ್ಯಾಸಿಯಸ್‌ನು ಒಪ್ಪಲಿಲ್ಲವಾದುದರಿಂದ ಅವನು ಬ್ರೂಟಸ್‌ನನ್ನು ಒಂದು ಕಡೆಗೆ ಕರೆದುಕೊಂಡು ಹೋಗಿ, “ನೀನು ಮುಂದಾಲೋಚನೆ ಇಲ್ಲದೆ ಮಾತು ಕೊಟ್ಟಿರುವೆ ಅವನು ಜನರನ್ನು ಎಷ್ಟುಮಟ್ಟಿಗೆ ಉದ್ವೇಗಗೊಳಿಸಬಲ್ಲನೆಂಬುದನ್ನು ಯೋಚಿಸಿದೆಯಾ?” ಎಂದನು. ಬ್ರೂಟಸ್ಸಿಗೆ ತನ್ನ ಕಾರ್ಯಗಳೂ ಕಾರಣಗಳೂ ಸರಿಯಾದವುಗಳೆಂದೇ ನಂಬಿಕೆಯಿದ್ದುದರಿಂದ, ಜನರೂ ಹಾಗೆಯೇ ಅವುಗಳನ್ನು ಕುರಿತು ತಿಳಿದಿರುವರೆಂದೂ, ಅಥವಾ ಹಾಗೆ ತಿಳಿದುಕೊಳ್ಳುವರು ಎಂದೂ ಯೋಚಿಸಿದ್ದನು. ಆದುದರಿಂದ ಆತನು, “ಕ್ಯಾಸಿಯಸ್! ನಾನು ಜನರಿಗೆ ಈ ವಿಚಾರವನ್ನು ತಿಳಿಸುವೆನು; ಸೀಸರ್‌ನನ್ನು ಕೊಲ್ಲುವುದಕ್ಕೆ ನಮಗೇನು ಕಾರಣಗಳಿದ್ದುವೆಂಬುದನ್ನು ವಿವರಿಸುವೆನು. ನಮ್ಮ ಅನುಜ್ಞೆಯಿಂದ ಮಾತನಾಡುವುದಾಗಿ ಆನ್‌ಟೊನಿಯು ಹೇಳುವನು. ಸೀಸರನ ಕಳೇಬರಕ್ಕೆ ವಿಧಿವಿಹಿತವಾದ ಸಂಸ್ಕಾರವನ್ನು ನಡೆಸಬೇಕಾದುದು ನಮ್ಮ ಅಭಿಪ್ರಾಯವೆಂದು ತಿಳಿಸುವುದರಿಂದ ಅಪಾಯಗಳಿಗಿಂತಲೂ ಅನುಕೂಲಗಳು ಹೆಚ್ಚು!” ಎಂದನು. ಕ್ಯಾಸಿಯಸ್ ಮನಸ್ಸಿಲ್ಲದಿದ್ದರೂ ಬ್ರೂಟಸ್‌ನ ಮಾತಿಗೆ ಒಪ್ಪಬೇಕಾಯಿತು ಇಷ್ಟಾದ ಮೇಲೆ ಆ ಘಾತುಕರೆಲ್ಲರೂ ಹೊರಟುಹೋದರು.

ಆನ್‌ಟೊನಿ ಒಬ್ಬನೇ ನಿಂತನು. ಅವನು ಆ ಕಳೇಬರದ ಬಳಿಯಲ್ಲಿ ಮೊಣಕಾಲೂರಿ ಕುಳಿತುಕೊಂಡು "ಅಯ್ಯೋ! ಮಿತ್ರನೇ, ನೀನು ಭೂಶಾಯಿಯಾಗಿ ರಕ್ತಸುರಿಯುತ್ತ ಬಿದ್ದಿರಲು ನಾನು ಆ ಕಟುಕರಲ್ಲಿ ಸಾಧುವಾಗಿಯೂ ಮೃದುವಾಗಿಯೂ ನಡೆಯುತ್ತಿರುವೆನಲ್ಲಾ! ಇದುವರೆಗೆ ಬದುಕಿ ಬಾಳಿದ ಮಹನೀಯರಲ್ಲೆಲ್ಲಾ ಶ್ರೇಷ್ಠನಾಗಿದ್ದ ನೀನು ಇಂದು ಈ ಅವಸ್ಥೆಗೆ ಗುರಿಯಾದೆಯಾ! ಆಹಾ! ಇಂತಹ ಅಮೌಲ್ಯವಾದ ರಕ್ತವನ್ನು ಹೀಗೆ ಸುರಿಸಿದ ಕೈಗಳಿಗೆ ನರಕದ ಸಮಸ್ತ ಯಾತನೆಗಳೂ ಒಟ್ಟಿಗೆ ಉಂಟಾಗಲಿ. ನಿನ್ನ ಒಂದೊಂದು ಗಾಯವೂ ಉಸಿರಿಲ್ಲದ ಬಾಯಿಯಂತೆ ನನ್ನನ್ನು ಮಾತನಾಡುವ ಹಾಗೆ ಪ್ರೇರೇಪಿಸುತ್ತಿದೆ! ಈ ಜನರಿಗೆ ಸೀಸರನ ಶಾಪ ತಟ್ಟಿ, ಗೃಹಚ್ಛೇದವೂ, ರಾಜ್ಯವಿಪ್ಲವವೂ ಉಂಟಾಗಲಿ! ಇಟಲಿ ದೇಶ ಹಾಳಾಗಲಿ! ಯುದ್ಧವೆಂಬುದು ಸರ್ವಸಾಮಾನ್ಯವಾಗಿ, ಮಕ್ಕಳು ಕತ್ತರಿಸಿ ಬೀಳುತ್ತಿದ್ದರೆ ತಾಯಿಯರು ನೋಡಿ ಮುಗುಳುನಗೆ ನಗುವಂತಾಗಲಿ! ಅಯ್ಯೋ ಘಾತುಕಕರ್ಮವೇ!" ಎಂದು ಮೊದಲಾಗಿ ಸಂತಾಪಪಟ್ಟು ಸೀಸರನ ಉತ್ತರಾಧಿಕಾರಿಯಾದ ಆಕ್ಟೇವಿಯಸ್ ಸೀಸರನಿಗೆ ರೋಮಿಗೆ ಬರದಂತೆ ಸಮಾಚಾರವನ್ನು ಕೊಟ್ಟುಕಳುಹಿಸಿ, ಆ ಮೃತದೇಹವನ್ನು ಪೇಟೆಯ ಚೌಕಕ್ಕೆ ಸಾಗಿಸಿಕೊಂಡು ಹೊರಟನು.

ಆ ವೇಳೆಗೆ ಬ್ರೂಟಸ್ಸನು ಅಲ್ಲಿ ಜಗತಿಯಮೇಲೆ ನಿಂತು, ಅಂದಿನ ವಿದ್ಯಮಾನಗಳನ್ನು ಅಲ್ಲಿ ಸೇರಿದ್ದ ಜನರಿಗೆ ಹೇಳುತ್ತಿದ್ದನು. ಜನಸಮೂಹವು ಬ್ರೂಟಸ್ಸನು ಸತ್ಪುರುಷನೆಂಬ ಅಭಿಪ್ರಾಯವುಳ್ಳವರಾಗಿದ್ದ ಕಾರಣ, ಅವನ ಮಾತುಗಳನ್ನು ಸಮಾಧಾನವಾಗಿಯೇ ಕೇಳುತ್ತಿದ್ದರು. ಅವನು ವಾಗ್ಮಿ; ವಿದ್ವಾಂಸ. ಆದ್ದರಿಂದ ವ್ಯಾಕರಣ ಬದ್ಧವಾಗಿ ಅಲಂಕಾರಯುಕ್ತವಾಗಿ ಪ್ರೌಢವಾದ ರೀತಿಯಲ್ಲಿ ಮಾತನಾಡುತ್ತಿದ್ದನು; ಆದರೆ ಜನರ ಹೃದಯವು ಮರುಗುವಂತೆ ಮಾತನಾಡಲಾರನು. ಅವನು "ರೋಮನರೇ, ದೇಶ ಬಾಂಧವರೇ, ದೇಶವತ್ಸಲರೇ, ನಾನು ಹೇಳುವುದನ್ನು ಸಾವಧಾನಮನಸ್ಸಿನಿಂದ ಕೇಳಬೇಕೆಂದೂ ವಿಚಕ್ಷಣೆಯಿಂದ ವಿಮರ್ಶಿಸಬೇಕೆಂದೂ ನಿಮ್ಮನ್ನು ಪ್ರಾರ್ಥಿಸುವೆನು. ಈ ಜನರಲ್ಲಿ ಸೀಸರನ ಸ್ನೇಹಿತರು ಯಾರಾದರೂ ಇದ್ದರೆ,

ಅಂಥವರಿಗೆ ಹೇಳಲಪೇಕ್ಷಿಸುವೆನೇನೆಂದರೆ, ಸೀಸರನಲ್ಲಿ ನನಗೆ ಪ್ರೀತಿಯು ಯಾರ ಪ್ರೀತಿಗಿಂತಲೂ ಕಡಿಮೆಯಾಗಿರಲಿಲ್ಲ. ಆದರೆ ನಾನು ಸೀಸರನ ಮೇಲೆ ಕೈ ಎತ್ತಬಹುದೆ?—ಎಂದು ಕೇಳುವಿರಲ್ಲವೆ? ಬ್ರೂಟಸ್ಸಿಗೆ ಸೀಸರನಿಗಿಂತಲೂ ರೋಮಿನ ಮೇಲೆ ಪ್ರೀತಿ ಹೆಚ್ಚು. ಅವನು ಜೀವಂತನಾಗಿದ್ದು ನಾವೆಲ್ಲರೂ ದಾಸರಂತೆ ನಿರ್ಬಂಧದಲ್ಲಿ ಜೀವಿಸುವುದನ್ನು ಯಾರಾದರೂ ಬಯಸುತ್ತಿರುವಿರೋ? ಅಥವಾ ಅವನು ಸತ್ತು ನೀವೆಲ್ಲರೂ ಸ್ವತಂತ್ರರಾಗಿ ಬದುಕುವುದನ್ನು ಆಶಿಸುವಿರೋ? ಸ್ವದೇಶಸ್ವಾತಂತ್ರ್ಯವನ್ನು ಬಯಸದ ಅಂತಹ ನೀಚನು ಯಾರು? ಯಾರಾದರೂ ಅಂತಹ ಮನುಷ್ಯನಿದ್ದರೆ, ಸೀಸರ್‌ನ ಸಾವಿನಿಂದ ಅವನಿಗೆ ಅಪಕಾರವಾಯಿತು, ಎಂದು ಹೇಳುವೆನು. ಉತ್ತರ ಹೇಳುವವರು ಹೇಳಬಹುದು'' ಎಂದನು.

'' ಇಲ್ಲ '' ಎಂದು ಉತ್ತರ ಬಂದಿತು.

ಬ್ರೂಟಸ್—'' ಹಾಗಾದರೆ, ನಾನು ಯಾರಿಗೂ ಅಪರಾಧ ಮಾಡಿದಂತಾಗಲಿಲ್ಲ. . . . . ''

ಇಷ್ಟು ಹೊತ್ತಿಗೆ ಆನ್‌ಟೋನಿಯೂ ಅವನ ಸಹಚರರೂ ಸೀಸರನ ಕಳೇಬರ ಸಹಿತವಾಗಿ ಅಲ್ಲಿಗೆ ಬಂದರು. ಸೀಸರನ ಮೃತದೇಹವನ್ನು ನೋಡಿದುದರಿಂದ ಜನರ ಮನಸ್ಸೆಲ್ಲಾ ಆ ಕಡೆ ಹೋಯಿತು. ಇದನ್ನು ಬ್ರೂಟಸ್‌ನು ಅರಿಯಲಿಲ್ಲ. ಆಗ ಅವನು ಮತ್ತೆ ಜನರನ್ನು ಕುರಿತು '' ದೇಶಾಭಿಮಾನಿಗಳೇ, ನನ್ನಲ್ಲಿ ಅಪಾರವಾದ ಪ್ರೀತಿಯುಳ್ಳ ಸೀಸರ್‌ನನ್ನು ರೋಮಿನ ಸ್ವಾತಂತ್ರ್ಯಕ್ಕಾಗಿ ನಾನು ಕೊಂದೆನು. ನನ್ನ ಮರಣದಿಂದ ನನ್ನ ದೇಶಕ್ಕೆ ಹಿತವಾಗುವುದಾದರೆ, ಇದೋ ನನ್ನ ಆಯುಧವು ನನ್ನನ್ನು ಕೊಲ್ಲುವುದಕ್ಕೆ ಸಿದ್ಧವಾಗಿದೆ '' ಎಂದನು.

ಜನಸಂದಣಿಯಿಂದ '' ಬ್ರೂಟಸ್, ಸುಖವಾಗಿರು. ದೇಶಾಭಿಮಾನಿಯಾದ ನೀನು ಚಿರಕಾಲ ಬಾಳು '' ಎಂಬ ಮಾತು ಕೇಳಿಸಿತು. ಕೆಲವು ಜನರು ವಿಜಯಶಾಲಿಯಾದ ಇವನನ್ನು ಉತ್ಸವದೊಡನೆ ಮನೆಗೆ ಕಳುಹಿಸಬೇಕೆಂದರು. ಕೆಲವರು ಇವನ ಪ್ರತಿಮೆಯನ್ನು ಮಾಡಿಸಿಡಬೇಕೆಂದರು. ಇನ್ನು ಕೆಲವರು ಸೀಸರನ ಸ್ಥಾನದಲ್ಲಿ ಇವನು ಸರ್ವಾಧಿಕಾರಿಯಾಗಿರಲಿ—ಎಂದರು.

ಆನ್‌ಟೊನಿಯು ಮಾತನಾಡುವುದಕ್ಕಾಗಿ ಜಗತಿಯ ಮೇಲೆ ಹೆಜ್ಜೆ ಇಡುವಾಗ್ಗೆ ಜನಸಂದಣಿಯಲ್ಲಿ ಸ್ವಲ್ಪ ಗದ್ದಲವಾಗುತ್ತಿತ್ತು. "ಸೀಸರನು ಸ್ವಾತಂತ್ರ್ಯಕಂಟಕನಾಗಿದ್ದನು. ಅವನನ್ನು ವಧೆ ಮಾಡಿದುದರಿಂದ ರೋಮ್ ರಾಜ್ಯಕ್ಕೆ ಸುಖವಾಯಿತು" ಎಂದು ಅವರು ತಿಳಿದಿದ್ದರು. ಒಬ್ಬ ರೋಮನನು "ಚಿಂತೆಯಿಲ್ಲ. ಅವನು ಮಾತನಾಡಲಿ" ಎಂದನು. ಹೀಗೆ ಜನಸಂದಣಿಯಲ್ಲಿ ಬೇರೆ ಬೇರೆ ಅಭಿಪ್ರಾಯಗಳುಂಟಾಗುತ್ತ, ಸ್ವಲ್ಪ ಗದ್ದಲ ಅಡಗಲು, ಆನ್‌ಟೊನಿಯು ಮಾತನಾಡತೊಡಗಿದನು. ಬ್ರೂಟಸ್ಸನ ದೂಷಣೆಯನ್ನೂ ಸೀಸರನ ಸ್ತೋತ್ರವನ್ನೂ ಕೇಳಲು ಅವರು ಈಗ ಒಪ್ಪುವಂತಿರಲಿಲ್ಲ, ಅದನ್ನು ಚೆನ್ನಾಗಿ ತಿಳಿದಿದ್ದದ್ದರಿಂದ ಅವನು ಹೀಗೆ ಆರಂಭಿಸಿದನು :—

"ಸ್ನೇಹಿತರೇ, ರೋಮನರೇ, ದೇಶಾಭಿಮಾನಿಗಳೇ, ನನ್ನ ವಿಜ್ಞಾಪನೆಯನ್ನು ಲಾಲಿಸಿ. ನಾನು ಸೀಸರನ ಸಮಾಧಿಕಾರ್ಯಗಳನ್ನು ನೆರವೇರಿಸಲು ಬಂದಿರುವೆನೇ ಹೊರತು, ಅವನನ್ನು ಹೊಗಳುವುದಕ್ಕಲ್ಲ. ಮನುಷ್ಯರು ಮಾಡುವ ಪಾಪಕರ್ಮವು ಅವರು ಸತ್ತ ಮೇಲೂ ಜೀವಿಸಿರುವುದು. ಅವರ ಸತ್ಕರ್ಮವು ಅನೇಕ ವೇಳೆ ಅವರೊಡನೆಯೇ ಮೃತಿಹೊಂದುವುದು. ಸೀಸರನ ವಿಚಾರದಲ್ಲಿಯೂ ಹಾಗೆಯೇ ಸರಿ. ಅವನು ಮಹತ್ವಾಕಾಂಕ್ಷಿಯಾಗಿದ್ದನೆಂದು ಬ್ರೂಟಸ್ಸನು ನಿಮಗೆ ಹೇಳಿರುವನು. ಹಾಗಿದ್ದರೆ ಅದು ಮಹಾಪರಾಧ; ಸೀಸರನಿಗೆ ಅದಕ್ಕಾಗಿ ಮಹಾ ದಂಡನೆಯೇ ಆಯಿತು. ನಾನೂ ಸೀಸರನೂ ಸ್ನೇಹಿತರಾಗಿದ್ದೆವು. ಆತನು ನನ್ನ ವಿಚಾರದಲ್ಲಿ ಸ್ನೇಹಪರನೂ ನ್ಯಾಯಪರನೂ ಆಗಿದ್ದನು. ಆದರೂ ಅವನು ಮಹತ್ವಾಕಾಂಕ್ಷಿಯಾಗಿದ್ದನೆಂದು ಬ್ರೂಟಸ್ಸನು ಹೇಳಿದ್ದಾನೆ, ಬ್ರೂಟಸ್ಸನು ಮಹನೀಯ; ಅವನ ಮಾತು ಗಣ್ಯವಾದದ್ದು. ಸೀಸರನು ಅನೇಕ ದೇಶಗಳನ್ನು ಗೆದ್ದು ರಾಜ್ಯವನ್ನು ವಿಸ್ತರಿಸಿದನು; ರಾಜಾಧಿರಾಜರುಗಳನ್ನು ಇಲ್ಲಿಗೆ ಸೆರೆಹಿಡಿದು ತಂದು ತಮ್ಮ ಬಂಧವಿಮೋಚನೆಗಾಗಿ ಅವರು ತೆತ್ತ ದ್ರವ್ಯದಿಂದ ರೋಮಿನ ಭಂಡಾರವನ್ನು ತುಂಬಿದನು. ಇದು ಮಹತ್ವಾಕಾಂಕ್ಷೆಯೆಂದು ತೋರಿರಬಹುದೇ? ಬಡವರು ಸಂಕಟದಿಂದ ಅತ್ತರೆ ಸೀಸರನು ಅವರೊಡನೆ ಅಳುತ್ತಿದ್ದನು; ಮಹತ್ವಾಕಾಂಕ್ಷೆಯೆಂಬುದು ಇನ್ನು ಸ್ವಲ್ಪ ಗಡುಸಾಗಿರಬೇಕಲ್ಲವೇ?

ಆದರೇನು? ಬ್ರೂಟಸ್ಸನು ನಿಮಗೆ ಹಾಗೆಂದು ಹೇಳಿರುವನು. ಬ್ರೂಟಸ್ಸನು ಮಹನೀಯ. ನೀವೆಲ್ಲ ಕಂಡ ಹಾಗೆ, ನಾನು ಮೂರುಸಲ ಸೀಸರನಿಗೆ ಕಿರೀಟವನ್ನು ಸಮರ್ಪಿಸಿದರೂ ಅವನು ಅದನ್ನು ಅಂಗೀಕರಿಸಲಿಲ್ಲ. ಇದು ಮಹತ್ವಾಕಾಂಕ್ಷೆಯೇ? ಬ್ರೂಟಸನೇನೋ 'ಹೌದು' ಎಂದಿದ್ದಾನೆ; ಬ್ರೂಟಸನು ಮಹನೀಯನೆಂಬುದರಲ್ಲಿ ಸಂಶಯವಿಲ್ಲ, ನಾನು ಮಾತಾಡುತ್ತಿರುವುದು ಬ್ರೂಟಸನನ್ನು ವಿರೋಧಿಸಬೇಕೆಂದಲ್ಲ. ನನಗೆ ತಿಳಿದಿರುವುದನ್ನು ನಿಮಗೆ ತಿಳಿಸುವುದಕ್ಕೆ. ನೀವೆಲ್ಲರೂ ಸೀಸರನನ್ನು ಪ್ರೀತಿಸುತ್ತಿದ್ದಿರಿ. ಅದಕ್ಕೆ ಕಾರಣವಿಲ್ಲದೆ ಇರಲಿಲ್ಲ. ಹೀಗಿರಲು ಅವನಿಗಾಗಿ ಅಳಲು ಅಡ್ಡಿಯೇನು? ಅಯ್ಯೋ! ಜನರೆಲ್ಲರೂ ವಿಚಾರಶೂನ್ಯರಾದರೆ? ವಿವೇಚನೆಯಿಲ್ಲದವರಾದರೆ?'' ಎಂದು ಹೇಳಿ, ವ್ಯಸನದಿಂದ ಸ್ತಂಭೀಭೂತನಾದಂತೆ ಕೆಲವು ಕ್ಷಣ ಸುಮ್ಮನಿದ್ದು, ಅನಂತರ '' ಸ್ನೇಹಿತರೇ, ಸೀಸರನ ಶವದಲ್ಲಿ ಐಕ್ಯವಾಗಿ ಬಿಟ್ಟಿರುವ ನನ್ನ ಮನಸ್ಸು ಹಿಂತಿರುಗಲಿ, ಸ್ವಲ್ಪ ತಡೆಯಿರಿ—'' ಎಂದನು.

ಈ ವೇಳೆಗೆ ಜನರು ಆನ್‌ಟೊನಿಗೆ ಬಹುಮಟ್ಟಿಗೆ ಮನಸೋತಿದ್ದರು, '' ಅವನು ಹೇಳುವುದು ಸಕಾರಣವಾಗಿದೆ. ಸರಿಯಾಗಿ ಯೋಚಿಸಿದರೆ. ಸೀಸರನ ಕೊಲೆಯು ಮಹಾಪರಾಧವೇ ಆಯಿತು ಎಂದು ತೋರುವುದು. ನಮಗೆ ಅವನಿಗಿಂತ ಉತ್ಕೃಷ್ಟನಾದ ಪ್ರಭುವು ದೊರೆಯುವನೇ? ಅವನು ಅರಸುತನವನ್ನು ಬೇಡವೆಂದನು. ಕಿರೀಟವನ್ನು ಬೇಡವೆಂದನು. ಆದ್ದರಿಂದ ಅವನಿಗೆ ದುರಾಶೆಯಿರಲಿಲ್ಲವೆಂಬುದು ಖಂಡಿತ. ನೋಡಿ, ನೋಡಿ, ಆನ್‌ಟೊನಿಯನ್ನು ನೋಡಿ! ಅವನ ಕಣ್ಣುಗಳು ದುಃಖದಿಂದ ಕೆಂಪಾಗಿವೆ. ಆನ್‌ಟೊನಿ ಯಂಥ ಗುಣಾಢ್ಯನುಂಟೆ!'' ಎಂದು ಮಾತನಾಡುತ್ತಿದ್ದರು. ಈ ವೇಳೆಗೆ ಆನ್‌ಟೊನಿಯು ಮನಸ್ಸನ್ನು ಸಮಾಧಾನಕ್ಕೆ ತಂದುಕೊಳ್ಳುತ್ತ ಮತ್ತೆ ಮಾತನಾಡಲು ಉಪಕ್ರಮಿಸಿದನು :—

'' ಇನ್ನೂ ನಿನ್ನೆಯ ದಿನ ಸೀಸರನ ಮಾತೆಂದರೆ ಲೋಕಮಾನ್ಯವಾಗಿದ್ದಿತು. ಇಂದು ಅವನು ಕೊಲೆಗೆ ಸಿಕ್ಕಿ ಒಬ್ಬ ಸಾಮಾನ್ಯನಂತೆ ಬಿದ್ದಿರುವನು. ಮಹನೀಯರೆ, ಬ್ರೂಟಸ್ ಮತ್ತು ಕ್ಯಾಸಿಯಸರ ಮೇಲೆ ರೇಗುವಂತೆಯೂ ದಂಗೆ ಏಳುವಂತೆಯೂ ನಿಮ್ಮ ಮನಸ್ಸನ್ನು ಉದ್ವೇಗ

ಗೊಳಿಸಿದರೆ ನಾನು ಅವರಿಗೆ ಅನ್ಯಾಯಮಾಡಿದಂತೆಯೇ ಸರಿ. ಅವರು ಮಹನೀಯರೆಂದು ನೀವೆಲ್ಲರೂ ಒಲ್ಲಿರಿ; ಅಂಥ ಮಹನೀಯರಿಗೆ ಅನ್ಯಾಯ ವಾಗಬಾರದು! ಸತ್ತವರಿಗೆ ಅನ್ಯಾಯವಾದರೂ ಚಿಂತೆಯಿಲ್ಲ, ನನಗೆ ಅನ್ಯಾಯವಾದರೂ ಚಿಂತೆಯಿಲ್ಲ, ನಿಮ್ಮೆಲ್ಲರಿಗೂ ಅನ್ಯಾಯವಾದರೂ ಚಿಂತಿಯಿಲ್ಲ. ಇದೋ, ಸೀಸರನು ಬರೆದಿಟ್ಟ ಮರಣಶಾಸನವಿಲ್ಲಿರುವುದು. ಅದನ್ನು ನೀವು ಕೇಳಿದರೆ—ನಾನೇನೋ ಅದನ್ನು ಓದಿ ಹೇಳುವುದಿಲ್ಲ—ಅದನ್ನು ನೀವು ಕೇಳಿದರೆ, ನೀವು ಸೀಸರನ ಒಂದೊಂದು ಗಾಯವನ್ನೂ ಕಣ್ಣಿಗೆ ಒತ್ತಿಕೊಳ್ಳುವಿರಿ...." ಎಂದನು. ಜನಸಂದಣಿಯಿಂದ "ಆತನ ಮರಣಶಾಸನವನ್ನು ಓದಿ ಹೇಳಬೇಕು, ಅವಶ್ಯವಾಗಿ ಓದಿ ಹೇಳಲೇ ಬೇಕು" ಎಂದು ಹಲವು ತಡವೆ ಗದ್ದಲವು ಕೇಳಿಬಂದಿತು.

ಆನ್‌ಟೊನಿ—"ಮಿತ್ರರೆ, ಸ್ವಲ್ಪ ತಾಳ್ಮೆಯಿಂದಿರಿ, ನಾನು ಅದನ್ನು ಓದಬಾರದು. ಏಕೆಂದರೆ ನಾನು ಅದನ್ನು ಓದಿ ಸೀಸರ್‌ನು ನಿಮ್ಮನ್ನು ಎಷ್ಟು ಮಟ್ಟಿಗೆ ಪ್ರೀತಿಸುತ್ತಿದ್ದನೆಂಬುದು ಗೊತ್ತಾದರೆ ನೀವು ರೇಗಿ ಹುಚ್ಚರಂತಾಗಿ ಬಿಡುವಿರಿ; ಆದುದರಿಂದ ನೀವು ಆತನ ಶಾಸನವನ್ನು ತಿಳಿಯದಿರುವುದೇ ಉತ್ತಮ" ಎಂದನು.

ಆದರೆ ಆನ್‌ಟೊನಿಯು ಹಿಂತೆಗೆದಷ್ಟೂ ಜನರಲ್ಲಿ ಸೀಸರನ ವಿಚಾರ ವನ್ನು ಸರಿಯಾಗಿ ತಿಳಿಯಬೇಕೆಂಬ ಕುತೂಹಲವು ಉಕ್ಕಿಬರುತ್ತಿತ್ತು. ಆದುದರಿಂದ ಮತ್ತೆ ಮತ್ತೆ ಆ ಜನಸಂದಣಿಯಿಂದ "ದಯಮಾಡಿ ಓದ ಬೇಕು; ಸೀಸರನ ಮರಣಶಾಸನವನ್ನು ಓದಲೇಬೇಕು" ಎಂದು ಗದ್ದಲ ವುಂಟಾಯಿತು. ಆನ್‌ಟೊನಿಯು "ನಾನು ನಿಮಗೆ ಆತನ ಮರಣಶಾಸನ ವನ್ನು ಕುರಿತ ಸುದ್ದಿಯನ್ನು ಹೇಳಬಾರದಾಗಿತ್ತು. ಇದರಿಂದ ಬ್ರೂಟಸ್ ಮೊದಲಾದ ಮಹನೀಯರಿಗೆ ಅನ್ಯಾಯ ಮಾಡಿದಂತಾದೀತು! ಆದುದರಿಂದ ಸ್ನೇಹಿತರಿರಾ, ದಯಮಾಡಿ ಕ್ಷಮಿಸಿ!"

ಜನರು—"ಅವರು ದ್ರೋಹಿಗಳು! ಮಹನೀಯರೇ? ಅವರ ಮಾತಿರಲಿ; ಆ ಮರಣಶಾಸನವೇನು? ಮರಣಶಾಸನವೇನು? ನೀನು ಅಗತ್ಯವಾಗಿ ಓದಿ ಹೇಳಲೇಬೇಕು."

ಆನ್‌ಟೋನಿ—"ನಾನು ಬೇಡವೆಂದು ಹೇಳಿದರೂ ನೀವು ಬಲವಂತ ಮಾಡುತ್ತಿರುವಿರಿ. ಆದುದರಿಂದ ಓದಬೇಕಾಗಿ ಬಂತು. ಹಾಗಾದರೆ ಆ ಶಾಸನವನ್ನು ಮಾಡಿರುವ ಈತನ ಸುತ್ತಲೂ ನಿಂತುಕೊಳ್ಳಿರಿ. ಇನ್ನೊಮ್ಮೆ ಆ ಮಹನೀಯನನ್ನು ನೋಡಿರಿ, ಈತನ ಕಟ್ಟಕಡೆಯ ಇಚ್ಛೆಯನ್ನು ತಿಳಿಸುವೆನು ' ಎಂದು ಹೇಳಿ ಜಗತಿಯಿಂದ ಇಳಿದು ಬಂದು ಸೀಸರನ ಕಳೇಬರದ ಮೇಲೆ ಹೊದಿಸಿದ್ದ ಉತ್ತರೀಯವನ್ನು ತೆಗೆದು ' ಇದೋ ನೋಡಿ—ಕ್ಯಾಸಿಯಸ್‌ನು ತಿವಿದಗಾಯ; ಇದು ಕ್ಯಾಸ್ಕಾನು ತಿವಿದ ಗಾಯ, ಆಹಾ! ಇದು ಸೀಸರನಲ್ಲಿ ಅಖಂಡ ಪ್ರೀತಿಯುಳ್ಳ ಬ್ರೂಟಸ್ಸನು ಮಾಡಿದ ಗಾಯ. ಎಂತಹ ದೊಡ್ಡ ಗಾಯ! ನೋಡಿ ಇದರಿಂದ ರಕ್ತ ಹೇಗೆ ಸುರಿದು ಹರಿದು ಹೋಗಿದೆ! ಬ್ರೂಟಸನೆಂದರೆ ಸೀಸರನಿಗೆ ಪ್ರಾಣ; ಅವನ ಆ ಸ್ನೇಹಕ್ಕೆ ದೇವರೇ ಸಾಕ್ಷಿ! ಅಂಥವನು ಕೈಮಾಡಿದಾಗ ಸೀಸರನು, ಶತ್ರುವಿನ ಹೊಡೆತಕ್ಕಿಂತ ಮಿತ್ರನ ಕೃತಘ್ನತೆಯಿಂದ ಹತನಾಗಿ, ಹತಹೃದಯನಾಗಿ, ಮುಖಮುಚ್ಚಿಕೊಂಡು ಬಿದ್ದುಬಿಟ್ಟನು. . . . . ."

ಈ ವೇಳೆಗೆ ಜನರು ಅಳಲಾರಂಭಿಸಿದರು. ಆನ್‌ಟೋನಿಗೆ ಧೈರ್ಯ ಹೆಚ್ಚಿತು, ಆದುದರಿಂದ ಅವನು—"ಸೀಸರನು ಬಿದ್ದನು. ಆಹಾ! ಎಂಥ ನಿಪಾತವಾಯಿತು! ದೇಶಬಾಂಧವರೇ, ಕ್ರೂರಕೃತ್ಯದಿಂದ, ದ್ರೋಹದಿಂದ, ರಕ್ತಪ್ರವಾಹದಲ್ಲಿ ನೆಲಕ್ಕುರುಳಿದವನು ಸೀಸರನು ಮಾತ್ರವೆಂದು ತಿಳಿಯಬೇಡಿರಿ. ನೀವೂ ನಾನೂ ಸಮಸ್ತರೂ ಉರುಳಿದೆವು. ಏನು! ರಕ್ತವಾದ ಉಡುಗೆಯನ್ನು ನೋಡಿಯೇ ಅಳುವಿರಾ? ಆ ಕೊಲೆಗಾರರೂ ದ್ರೋಹಿಗಳೂ ಈತನ ಶರೀರದ ಮೇಲೆ ಮಾಡಿರುವ ಈ ಗಾಯಗಳನ್ನು ನೋಡಿ!" ಎಂದನು.

ಇಷ್ಟು ಹೊತ್ತಿಗೆ ಜನರು ಹುಚ್ಚರಂತಾಗಿ "ಸುಡು, ಇರಿ, ತಿವಿ, ಸೀಳು!" ಎಂದು ಅಬ್ಬರಿಸುತ್ತಿದ್ದರು. ಈ ಮಟ್ಟಿಗೆ ಜನರನ್ನು ಉದ್ವೇಗಗೊಳಿಸಿದ್ದರೂ ಅವರೆಲ್ಲರ ಮನಸ್ಸನ್ನು ಇನ್ನೂ ಹದಗೊಳಿಸುವ ಉದ್ದೇಶದಿಂದ ಅವರನ್ನು ಕುರಿತು ಆನ್‌ಟೋನಿಯು, "ಗುಣಾಢ್ಯರಾದ ಸ್ನೇಹಿತರೇ, ಮನೋಜ್ಞರಾದ ಮಿತ್ರರೇ, ನಿಮ್ಮನ್ನು ನಾನು ಹೀಗೆ ಉದ್ವೇಗಗೊಳಿಸಬಾರದಾಗಿತ್ತು. ಸೀಸರನನ್ನು ವಧೆಮಾಡಿರುವವರು ಮಹನೀಯರು; ಆತನ

ವಿಚಾರದಲ್ಲಿ ಅವರಿಗೆ ಏನು ಅಂತರಂಗದ ದುಃಖವಿದ್ದಿತೋ ನಾನು ಅರಿಯೆನು, ಅವರೇ ನಿಮಗೆ ತಮ್ಮ ಕಾರಣವನ್ನು ತಿಳಿಸಬಹುದು. ನೀವೆಲ್ಲರೂ ತಿಳಿದಿರುವ ಹಾಗೆ, ನಾನು ಮಹಾಶಯನಾದ ಬ್ರೂಟಸ್ಸನಂತೆ ವಾಗ್ಮಿಯಲ್ಲ; ಜನರ ಮನಸ್ಸು ಒಲಿಯುವಂತೆ ಮಾಡಿಕೊಳ್ಳುವ ಕುಶಲತೆಯು ನನ್ನಲ್ಲಿರುವುದಿಲ್ಲ. ನಾನು ನನ್ನ ಸ್ನೇಹಿತನಾದ ಸೀಸರನಲ್ಲಿದ್ದ ಪ್ರೀತಿಯಿಂದ ಪ್ರೇರಿತನಾಗಿ ಇದ್ದದ್ದಿದ್ದಂತೆ ಮಾತನಾಡಿದವನು ; ನನ್ನ ಮಾತಿನಲ್ಲಿ ಜನರನ್ನು ಉತ್ತೇಜನಗೊಳಿಸುವ ಓಜಸ್ಸೇ, ಶೈಲಿಯೇ, ರೀತಿಯೇ, ಅಲಂಕಾರವೇ, ಏನೂ ಇಲ್ಲ. ಬಾಯಲ್ಲಿ ಹೊರಟದ್ದನ್ನು ಆಡಿಬಿಡುತ್ತೇನೆ. ನಿಮಗೆಷ್ಟು ತಿಳಿದಿರುವುದೋ ನನಗೂ ಅಷ್ಟೇ ತಿಳಿದಿದೆ. ಅದನ್ನೇ ನಿಮಗೆ ಹೇಳಿದ್ದೇನೆ, ಸೀಸರನ ಗಾಯಗಳನ್ನು ತೋರಿಸಿ, ನನಗೆ ಪ್ರತಿಯಾಗಿ ಆ ಬಾಯಿಲ್ಲದ ಗಾಯಗಳೇ ನಿಮ್ಮಲ್ಲಿ ಮಾತನಾಡುವಂತೆ ಹೇಳಿಕೊಂಡಿದ್ದೇನೆ. ನಾನು ಬ್ರೂಟಸನಾಗಿದ್ದರೆ, ಈ ಪ್ರತಿಯೊಂದು ಗಾಯದಿಂದಲೂ ಮಾತನಾಡಿಸಿ, ರೋಮಿನ ಒಂದೊಂದು ಕಲ್ಲೂ ಈ ದ್ರೋಹಕ್ಕೆ ಪ್ರತಿಕ್ರಿಯೆ ಮಾಡಲು ಏಳುವಂತೆ ಮಾಡುತ್ತಿದ್ದೆನು '' ಎಂದನು.

ಜನರು—'' ನಾವು ಹಾಗೇ ಮಾಡುವೆವು ! ಬ್ರೂಟಸ್ಸನ ಮನೆಯನ್ನು ಸುಡುವೆವು ! ಆ ಸಂಚುಗಾರರನ್ನು ಸದೆಬಡಿಯುವೆವು !''

ಆನ್‌ಟೊನಿ—'' ಮಿತ್ರರೇ, ಏನು ! ಏನು ಭೀಕರ ಕೃತ್ಯ ! ನೀವು ಏನು ಮಾಡಲು ಹೊರಟಿರುವಿರೆಂಬುದನ್ನು ನೀವೇ ಅರಿಯಿರಿ. ಸೀಸರನನ್ನು ಪ್ರೀತಿಸಲು ನಿಮಗೆ ಎಷ್ಟು ಬಲವತ್ತರವಾದ ಕಾರಣಗಳುಂಟೆಂಬುದೇ ನಿಮಗೆ ತಿಳಿಯದು. ಆತನ ಮರಣಶಾಸನವನ್ನು ನೀವು ಇನ್ನೂ ಕೇಳಿಯೇ ಇಲ್ಲ.''

ಜನರು—'' ಓಹೊ ! ಮರೆತಿದ್ದೆವು. ದಯಮಾಡಿ ಅದನ್ನು ಓದಿ ಹೇಳು.''

ಆನ್‌ಟೊನಿ—'' ಇದೋ ! ಆತನ ಮರಣಶಾಸನ. ಇದೋ ಆತನ ಬರಹ. ಇದೋ, ಆತನ ಮುದ್ರೆ.— ರೋಮಿನ ಪ್ರತಿಯೊಬ್ಬ ನಾಗರಿಕನಿಗೂ ಎಪ್ಪತ್ತೈದು ಡ್ರ್ಯಾಕ್ಮಗಳು ಸಲ್ಲತಕ್ಕದ್ದು. ಟೈಬರ್ ನದಿಯ ಆಚೆ ಇರುವ ಉದ್ಯಾನಗಳೂ ಉಪವನಗಳೂ ರೋಮನರಿಗೂ ಅವರ ವಂಶೀಯರಿಗೂ ವಿಹಾರಸ್ಥಾನವಾಗಿರತಕ್ಕದ್ದು. . . .''

ಜನರಿಗೆ ಇನ್ನಾವುದನ್ನೂ ಕೇಳಲು ಅಭಿಲಾಷೆ ಇಲ್ಲವಾಯಿತು. ಅವರು ಪೇಟೆಯ ಚೌಕಕ್ಕೆ ನುಗ್ಗಿ, ಅಲ್ಲಿ ಸಾಲಾಗಿದ್ದ ಮರದ ಪೀಠಗಳನ್ನೂ ಹಂತಗಳನ್ನೂ ಕಾಲುಮಣೆಗಳನ್ನೂ ಕಿತ್ತು ತಂದರು. ಅವೆಲ್ಲವನ್ನೂ ಚಿತೆಯಾಗಿ ಒಡ್ಡಿ ಸೀಸರನ ಶವವನ್ನು ಅದರ ಮೇಲಿಟ್ಟು ಬೆಂಕಿ ಹಾಕಿದರು. ಚೆನ್ನಾಗಿ ಹೊತ್ತಿಕೊಳ್ಳಲು, ಚಿತೆಯಿಂದ ಕೊಳ್ಳಿಗಳನ್ನು ಹಿರಿದುಕೊಂಡು ಆ ಸಂಚುಗಾರರ ಮನೆಗಳ ಕಡೆಗೆ ನುಗ್ಗಿದರು. ಆದರೆ ಅವರು ಇಷ್ಟು ಹೊತ್ತಿಗೆ ಈ ವರ್ತಮಾನವನ್ನು ಕೇಳಿ ತಲೆತಪ್ಪಿಸಿಕೊಂಡು ಹೋಗಿದ್ದರು.

ಈಗ ಆನ್‌ಟೊನಿಯೂ ಪ್ರಜೆಗಳೂ ಒಂದು ಪಂಗಡವಾದರು; ಶ್ರೀಮಂತ ಪಕ್ಷಪಾತಿಯಾದ ಸೆನೆಟ್ ಸಭೆಯು ಮತ್ತೊಂದು ಪಂಗಡವಾಯಿತು. ಇವರ ಮಧ್ಯದಲ್ಲಿ, ಸೀಸರನ ಉತ್ತರಾಧಿಕಾರಿಯಾದ ಆಕ್ಟೇವಿಯಸ್ ಸೀಸರನು ಒಂದು ಸೇನೆಯನ್ನು ತಂದು ನಿಂತುಕೊಂಡನು. ಆಕ್ಟೇವಿಯಸನಿಗೆ ಇನ್ನೂ ಚಿಕ್ಕ ವಯಸ್ಸು, ಸುಮಾರು ಇಪ್ಪತ್ತು ವರ್ಷ; ಅವನು ಸುಂದರ, ಬುದ್ಧಿವಂತ; ಆದರೆ ದಯಾದಾಕ್ಷಿಣ್ಯ ವರ್ಜಿತ, ಅವನ ಮುಖಭಾವವನ್ನು ನೋಡಿ ಅದರ ಹಿಂದೆ ಮನೋಭಾವವೇನಿರಬಹುದೆಂದು ಹೇಳಲು ಯಾರಿಗೂ ಸಾಧ್ಯವಾಗಿರಲಿಲ್ಲ. ಇವನು ಮೊದಲು ಸೆನೆಟ್ ಸಭೆಯಲ್ಲಿ ಪಕ್ಷಪಾತವನ್ನಿಟ್ಟನು; ಆದರೆ ಅದರಿಂದ ಏನೂ ಉಪಯೋಗ ಕಾಣಲಿಲ್ಲ. ಆದ್ದರಿಂದ ಆನ್‌ಟೊನಿಯ ಕಡೆ ಸೇರಿಕೊಂಡನು. ಇವರಿಬ್ಬರೂ ಲೆಪಿಡಸ್ ಎಂಬ ಪ್ರಜಾಪಕ್ಷದವನೂ ಸೇರಿ ಒಂದು 'ತ್ರಿವೀರ' ಪ್ರಭುತ್ವವನ್ನು ಸ್ಥಾಪಿಸಿ ಸ್ವೇಚ್ಛೆಯಾಗಿ ಆಳುವುದಕ್ಕೆ ತೊಡಗಿದರು. ಅವರನ್ನು ಪ್ರತಿಭಟಿಸಿದವರೆಲ್ಲರೂ, ಶತ್ರುಗಳಾಗಲಿ, ಮಿತ್ರರಾಗಲಿ, ಪ್ರಾಣ ತೆತ್ತರು.

ಬ್ರೂಟಸ್ ಕ್ಯಾಸಿಯಸ್ ಇಬ್ಬರೂ ರೋಮ್ ಚಕ್ರಾಧಿಪತ್ಯದ ಪೂರ್ವ ಭಾಗದಲ್ಲಿದ್ದ ತಮ್ಮ ತಮ್ಮ ಪ್ರಾಂತಗಳಿಗೆ ಹೋಗಿ ಅಲ್ಲಿ ಆಧಿಪತ್ಯ ಮಾಡುತ್ತಿದ್ದರು. ಕ್ಯಾಸಿಯಸನು ತನ್ನ ಮನಸ್ಸು ಬಂದಂತೆ ಆಳುತ್ತ, ಹಣಕಾಸು ಸಂಪಾದಿಸಿ ನೆಮ್ಮದಿಯಾಗಿದ್ದನು, ಆದರೆ ಬ್ರೂಟಸನಿಗೆ ಸುಖವಿರಲಿಲ್ಲ. ಅವನ ಹೆಂಡತಿ ಪೋರ್ಷಿಯೆಯು ಪತಿ ವಿರಹದಿಂದಲೂ, ಆಕ್ಟೇವಿಯಸ್ ಆನ್‌ಟೊನಿಗಳು ಪ್ರಬಲಿಸಿ ಬ್ರೂಟಸನನ್ನು ಗೆಲ್ಲಲು ಮಾಡು

ತ್ತಿದ್ದ ಪ್ರಯತ್ನಗಳನ್ನು ನೋಡಿಯೂ, ಕೊರಗಿ, ಬುದ್ಧಿಕೆಟ್ಟು, ಆತ್ಮಹತ್ಯೆ ಮಾಡಿಕೊಂಡಳು. ಈ ವರ್ತಮಾನವನ್ನು ತಿಳಿದ ಬ್ರೂಟಸನು ಅದನ್ನು ಹೇಗೆಹೇಗೋ ಸೈರಿಸಿಕೊಂಡಿದ್ದನು. ಆದರೂ ಅದು ಒಳಗೇ ಮನಸ್ಸನ್ನು ಸುಡುತ್ತಿತ್ತು. ಈ ಮಧ್ಯೆ ಕೈಯಲ್ಲಿ ಹಣಕಾಸು ಇಲ್ಲದೆ ಹೋಯಿತು. ಅದಕ್ಕಾಗಿ ಜನರನ್ನು ಪೀಡಿಸಲು ಅವನಿಗೆ ಇಷ್ಟವಿರಲಿಲ್ಲ. ಕ್ಯಾಸಿಯಸ್ಸಗೆ ಹೇಳಿ ಕಳುಹಿಸಲು ಅವನಿಂದಲೂ ಒರಲಿಲ್ಲ. ಈ ಸಂಬಂಧದಲ್ಲಿ ಅವರಿಗೆ ಮನಸ್ತಾಪವುಂಟಾಗಿ ಬ್ರೂಟಸ್ಸನು ಇದ್ದ ಸಾರ್ಡಿಸ್ ಸಗರದಲ್ಲಿ ಇಬ್ಬರೂ ಸೇರಿದರು. ಅವರವರಿಗೆ ಅಲ್ಲಿ ಹತ್ತಿಕೊಂಡ ವ್ಯಾಜ್ಯದಲ್ಲಿ ತಲೆಗಳು ಬಿದ್ದು ಹೋಗಬೇಕಾಗಿತ್ತು. ಆದರೆ ಬ್ರೂಟಸನ ತಾಳ್ಮೆ ವಿವೇಕಗಳಿಂದ ಅದು ನಿವಾರಣೆಯಾಗಿ ಎಂದಿನಂತೆ ಶಾಂತಿಯೂ ಸ್ನೇಹವೂ ನಿಂತುವು.

ಅಂದಿನ ರಾತ್ರಿ ಬ್ರೂಟಸನು ಚಿತ್ತಸ್ವಾಸ್ಥ್ಯವಿಲ್ಲದೆ, ತನ್ನ ಡೇರೆಯ ಬಾಗಿಲಲ್ಲಿ ಇಬ್ಬರು ಸೈನಿಕರನ್ನೂ ತನ್ನ ಆಳನ್ನೂ ಮಲಗಿಕೊಳ್ಳುವಂತೆ ಏರ್ಪ ಡಿಸಿ, ತಾನು ಕೈಯಲ್ಲಿ ಒಂದು ಪುಸ್ತಕವನ್ನು ಹಿಡಿದು ಮಲಗಲು ಪ್ರಯತ್ನ ಪಟ್ಟನು. ಮಿಕ್ಕ ಎಲ್ಲರಿಗೂ ಆಯಾಸದಿಂದ ನಿದ್ದೆ ಹತ್ತಿತ್ತು. ಬ್ರೂಟಸ ನೊಬ್ಬನೇ ಒಂದು ಸಣ್ಣ ದೀಪದ ಮುಂದೆ ಓದುತ್ತ ಕುಳಿತಿರಲು, ಆಗ, ನಡು ರಾತ್ರಿಯಲ್ಲಿ, ಸೀಸರನ ಭೂತವು ಅವನೆದುರಿಗೆ ಬಂದು ನಿಂತುಕೊಂಡಿತು.

ಬ್ರೂಟಸ್—"ಯಾರು ನೀನು ! ಮಾತಾಡು !"

ಭೂತ—"ನಿನ್ನ ದೌರ್ಭಾಗ್ಯದೇವತೆ, ಬ್ರೂಟಸ್ !"

ಬ್ರೂಟಸ್—"ನೀನು ಬಂದದ್ದು ಏಕೆ?"

ಭೂತ—"ನೀನು ತಿರುಗಿ ನನ್ನನ್ನು ನೋಡಬೇಕು, ಫಿಲಿಪಿಯಲ್ಲಿ ನೋಡಬೇಕು—ಎಂದು ಎಚ್ಚರಿಕೆ ಕೊಡುವುದಕ್ಕೆ !"

ಬ್ರೂಟಸ್—"ತಿರುಗಿ ನಿನ್ನನ್ನು ನೋಡಬೇಕೇ ?"

ಭೂತ—"ಹೌದು ! ಫಿಲಿಪಿಯಲ್ಲಿ."

ಬ್ರೂಟಸ್—"ಆಗಲಿ, ಹಾಗಾದರೆ !"

ಇಷ್ಟಾದ ಕೂಡಲೆ ಭೂತವು ಮಾಯವಾಯಿತು. ಅದನ್ನು ಅಲ್ಲಿ ಮಲಗಿದ್ದ ಸೈನಿಕರಾಗಲಿ ಲ್ಯೂಸಿಯಸನಾಗಲಿ ಕಾಣಲಿಲ್ಲ. ದೇಶಕ್ಕೆ ಶಾಂತಿ

ಯನ್ನೂ ಸ್ವಾತಂತ್ರ್ಯವನ್ನೂ ತರುತ್ತೇನೆಂದು ಬ್ರೂಟಸನು ಸೀಸರನನ್ನು ತೀರಿಸಿದನು. ಸೀಸರ್ ಹೋದರೆ ಸೀಸರನ ತತ್ವ, ಸೀಸರನ ಭಾವ, ಹೋಯಿತೇ? ಅವುಗಳು ಮೂರ್ತೀಭವಿಸಿ ಬಂದಂತೆ ಬಂದಿದ್ದ ಆನ್‌ಟೊನಿ ಆಕ್ಟೇವಿಯಸರನ್ನು ಅವನೂ ಕ್ಯಾಸಿಯಸನೂ ಮರುದಿನ ಫಿಲಿಪಿಯ ರಣರಂಗ ದಲ್ಲಿ ಸಂಧಿಸಬೇಕಾಯಿತು. ದಾರಿಯಲ್ಲಿ ಅಪಶಕುನಗಳಾದುವು. ಅವರ ಮೇಲೆ ಕಾಗೆಗಳೂ ಹದ್ದುಗಳೂ ಮಂಡಲಾಕಾರವಾಗಿ ಹಾರುವುದಕ್ಕೆ ಮೊದಲು ಮಾಡಿದುವು. ಮುಂದೆ ಬರುವುದರ ಭಯಂಕರ ಸೂಚನೆಯು ಇಂದೇ ಆಯಿತು.

ಯುದ್ಧದಲ್ಲಿ, ಆಕ್ಟೇವಿಯಸ್ ಸೀಸರನು ಬ್ರೂಟಸನನ್ನೂ ಆನ್‌ಟೊ ನಿಯು ಕ್ಯಾಸಿಯಸನನ್ನೂ ಎದುರಿಸಿದರು. ಬ್ರೂಟಸನ ಸೇನೆಯು ನುಗ್ಗಿ ಶತ್ರುಗಳನ್ನು ಸೋಯಿಸಿ ಕ್ಯಾಸಿಯಸನ ಸಹಾಯಕ್ಕೆ ಬರುತ್ತಿತ್ತು. ಆದರೆ ಕ್ಯಾಸಿಯಸನ ಸೇನೆಯು ಚದರಿಹೋಯಿತು. ಶತ್ರುಗಳು ಅವನ ಶಿಬಿರವನ್ನು ಸುಟ್ಟರು. ಇದನ್ನು ಅವನು ಹತ್ತಿರವಿದ್ದ ಒಂದು ಗುಡ್ಡದ ಮೇಲೆ ನಿಂತು ನೋಡುತ್ತಿರಲು, ಅವನ ಕಡೆಗೆ ಬ್ರೂಟಸನ ಸೇನೆ ಸಹಾಯಕ್ಕೆಂದು ಬರುತ್ತಿತ್ತು. ಇದನ್ನು ಅವನ ಆಳು ಶತ್ರುಸೇನೆಯೆಂದು ಭ್ರಮಿಸಿ ಈ ವೃತ್ತಾಂತವನ್ನು ಕ್ಯಾಸಿಯಸನಿಗೆ ತಿಳಿಸಲು, ಅವನು ಶತ್ರುವಶವಾಗುವುದ ಕ್ಕಿಂತ ಮರಣವೇ ಲೇಸೆಂದು ನಿಶ್ಚಯಿಸಿ, ತನ್ನ ಆಳಿನ ಕೈಯಲ್ಲಿ ಕತ್ತಿಯನ್ನು ಕೊಟ್ಟು—ಸೀಸರನನ್ನು ಇರಿದ ಕತ್ತಿಯನ್ನು ಕೊಟ್ಟು—ಅದರಿಂದಲೇ ಹತನಾದನು.

ಬ್ರೂಟಸನೂ ಅವನ ಅನುಚರರೂ ಸ್ವಲ್ಪ ಹೊತ್ತಿನ ಮೇಲೆ ಆ ಸ್ಥಳಕ್ಕೆ ಬಂದು ಈ ರೌದ್ರ ದೃಶ್ಯವನ್ನು ನೋಡಿದರು. ಸೀಸರನ ಅಂತರ ಪಿಶಾಚವು ಅಶಾಂತಿಯಿಂದ ಅಲೆಯುತ್ತ ದ್ರೋಹಿಗಳು ಹಿಡಿದಿದ್ದ ಆಯುಧ ಗಳನ್ನು ಅವರವರ ಹೃದಯದಲ್ಲಿಯೇ ಇರಿಯಿಸುತ್ತಿತ್ತು. ಬ್ರೂಟಸನು ಮತ್ತೊಂದು ಸಾರಿ ಯುದ್ಧಕ್ಕೆ ನಿಂತು ಪರಾಜಿತನಾಗಲು, ಕ್ಯಾಸಿಯಸ ನಂತೆಯೇ ಸಾಯುವುದಕ್ಕೆ ಸಿದ್ಧನಾದನು. ತನ್ನ ಅನುಚರರಲ್ಲಿ ಒಬ್ಬೊಬ್ಬ ರನ್ನಾಗಿ ಕರೆದು ತನ್ನನ್ನು ಕೊಲ್ಲುವಂತೆ ಕೇಳಿಕೊಂಡನು ; ಯಾರೂ ಅದಕ್ಕೆ

ಒಪ್ಪಲಿಲ್ಲ ; ಅವರೆಲ್ಲರಿಗೂ ಅವನಲ್ಲಿ ಅಷ್ಟು ಗೌರವ, ಅಷ್ಟು ಪ್ರೀತಿ ; ಕೊನೆಗೆ ಸ್ಟ್ರಾಟೋ ಎಂಬ ಸೇವಕನನ್ನು ಒಪ್ಪಿಸಿ ಅವನ ಕೈಯಲ್ಲಿ ತನ್ನ ಕತ್ತಿಯನ್ನು ಕೊಟ್ಟು, ಆ ದೃಶ್ಯವನ್ನು ನೋಡಲಾರದೆ ಅವನು ವಿಮುಖನಾಗಿರಲು, ಬ್ರೂಟಸನು ಅದರ ಮೇಲೆ ಹಾಯ್ದು ಬಲಿಯಾದನು.—ಸೀಸರನನ್ನು ಕೊಂದದ್ದಕ್ಕಿಂತ ನಿರಾಳವಾಗಿ ತನ್ನನ್ನು ಕೊಂದುಕೊಂಡನು.

ಬ್ರೂಟಸನು, ಆನ್‌ಟೊನಿ ಹೇಳಿದಂತೆ, ಆಗಿನ ರೋಮನರಲ್ಲೆಲ್ಲಾ ಮಹಾ ಘನವಂತ. ಮಿಕ್ಕ ಸಂಚುಗಾರರು ಸೀಸರನ ಕೊಲೆಮಾಡಿದ್ದು ಅವನ ಮೇಲಣ ಮಾತ್ಸರ್ಯದಿಂದ, ಮಹತ್ವದ ಮೇಲಣ ಅಸಹನೆಯಿಂದ. ಲೋಕಕ್ಕೆ ಸುಖಶಾಂತಿಗಳನ್ನು ಉಂಟುಮಾಡಬೇಕೆಂಬ ಘನೋದ್ದೇಶದಿಂದಲೂ, ಪ್ರಾಮಾಣಿಕತೆ ಋಜುಬುದ್ಧಿಗಳಿಂದಲೂ ಅವರಲ್ಲಿ ಸೇರಿದ್ದವನು ಬ್ರೂಟಸನೊಬ್ಬನೇಯೆ. ಅವನು ಪರಮ ಸಾತ್ವಿಕ, ಆದರ್ಶಪುರುಷ !

# ಕೆಲವು ಉತ್ತಮ ಕನ್ನಡ ಗ್ರಂಥಗಳು

### ಡಿ. ವಿ. ಗುಂಡಪ್ಪನವರಿಂದ

## ದಿವಾನ್ ಸಿ. ರಂಗಾಚಾರ್ಲು

ಇದು ಮೈಸೂರು ಸಂಸ್ಥಾನದ ಮೊದಲನೆಯ ಮುಖ್ಯ ಮಂತ್ರಿಯಾಗಿ, ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿ, ಭಾರತೀಯ ರಾಜ್ಯತಂತ್ರ ಕುಶಲರಲ್ಲಿ ಉತ್ತಮರೆಂದು ಪ್ರಸಿದ್ಧರಾದ ಮಹನೀಯರ ಜೀವನ ಚರಿತ್ರೆ

ಸಾದಾ ಪ್ರತಿ ರೂ. ೧-೪-೦ , ಉತ್ತಮ ರೂ ೨-೦-೦.

## ಗೋಪಾಲಕೃಷ್ಣ ಗೋಖಲೆ

ಪ್ರಸಿದ್ಧ ದೇಶಭಕ್ತರೂ ರಾಜಕೀಯ ರಹಸ್ಯಜ್ಞರೂ ಮಹಾತ್ಮ ಗಾಂಧಿಯವರಿಂದ ಗುರುವೆಂದೂ ಭಾವಿಸಲ್ಪಟ್ಟಿರುವ ಮಹನೀಯರ ಜೀವನಕಥೆ ಮತ್ತು ಉಪನ್ಯಾಸಗಳೂ ಈ ಗ್ರಂಥದಲ್ಲಡಗಿವೆ ಆದುದರಿಂದ ಇದು ನಮ್ಮ ಸ್ವರಾಜ್ಯ ಸಮಾರಂಭಕ್ಕೆ ಸಂಬಂಧಪಟ್ಟ ಅನೇಕ ಸಂಗತಿಗಳನ್ನು ತಿಳಿಸುವುದಾಗಿ ದೇಶಸೇವೆಯ ಮಾರ್ಗವನ್ನು ತಿಳಿಯಬೇಕೆನ್ನುವವರಿಗೆ ಅತ್ಯಂತ ಸಹಾಯಕರವಾಗಿದೆ ಯಾವ ಇಂಗ್ಲಿಷ್ ಗ್ರಂಥದಲ್ಲಿಯೂ ದೊರೆಯದ ಕೆಲವು ಮಹತ್ವದ ಸಂಗತಿಗಳು ಈ ಪುಸ್ತಕದಲ್ಲಿದೆ ರೂ. ೧-೬-೦.

## ಶ್ರೀ ವಿದ್ಯಾರಣ್ಯ ಸಮಕಾಲೀನರು

ಶ್ರೀ ವಿದ್ಯಾರಣ್ಯ ಸ್ವಾಮಿಗಳವರ ಕಾಲದಲ್ಲಿ ಪ್ರಸಿದ್ಧರಾಗಿ ಬಾಳಿದವರಾದ, ಅವರ ಗುರುವರ್ಗಕ್ಕೆ ಸೇರಿದ್ದ—ವಿದ್ಯಾತೀರ್ಥರು, ಭಾರತೀಕೃಷ್ಣತೀರ್ಥರು, ಶಂಕರಾನಂದರು, ಶ್ರೀಕಂಠನಾಥರು—ಎಂಬ ನಾಲ್ವರು ಮಹನೀಯರ ಜೀವಿತಕಥೆ ಮತ್ತು ಕೃತಿವಿವರಗಳೂ ಶ್ರೀ ವಿದ್ಯಾರಣ್ಯರ ಪೂರ್ವಾಶ್ರಮದ ತಮ್ಮಂದಿರಾದ ಸಾಯಣಾಚಾರ್ಯರು, ಭೋಗನಾಥಕವಿ—ಇವರಿಬ್ಬರ ವೃತ್ತಾಂತಗಳೂ ಇದರಲ್ಲಿ ಸಪ್ರಮಾಣವಾಗಿ ವಿಸ್ತೃತವಾಗಿವೆ. ರೂ. ೨-೪-೦.

---

ಕರ್ಣಾಟಕ ಪ್ರಕಟನಾಲಯ, ಬೆಂಗಳೂರು ಸಿಟಿ

# ಕೆಲವು ಉತ್ತಮ ಕನ್ನಡ ಗ್ರಂಥಗಳು

## ಡಿ. ವಿ. ಗುಂಡಪ್ಪನವರಿಂದ

## ಶ್ರೀ ವಿದ್ಯಾರಣ್ಯವಿಜಯ ನಾಟಕ

ಕರ್ಣಾಟಕ ದೇಶದ ಮುಖ್ಯ ಆದರ್ಶ ಪುರುಷರಾದ ವಿದ್ಯಾರಣ್ಯ ಸ್ವಾಮಿಗಳ ದಿವ್ಯ ಚರಿತ್ರೆಯೂ ಅವರು ಹಿಂದೂ ಮತವನ್ನು ಉದ್ಧಾರಗೊಳಿಸಿದ ಬಗೆಯೂ ಇದರಲ್ಲಿ ಚಿತ್ರಿತವಾಗಿದೆ. ದೇಶಾಭಿಮಾನವನ್ನೂ ಧರ್ಮಾಭಿಮಾನವನ್ನೂ ಉಕ್ಕಿಸತಕ್ಕ ಪುಸ್ತಕ

ಸಾದಾ ಪ್ರತಿ ರೂ. ೧-೪-೦ , ಉತ್ತಮ ಪ್ರತಿ ರೂ ೨-೦-೦.

## ಉಮರನ ಒಸಗೆ

ಉಮರ್ ಉಯ್ಯಾಮ್ ಎಂಬ ಪಾರಸೀ ಕವಿಯನ್ನು ಅನುಸರಿಸಿ ಫಿಟ್ಸ್-ಜೆರಲ್ಡ್ ಎಂಬ ಇಂಗ್ಲಿಷ್ ಕವಿಯು ಬರೆದಿರುವ ಲೋಕಪ್ರಸಿದ್ಧವಾದ ಕವನದ ಕನ್ನಡ ಅನುವಾದ. ಸರಳವಾದ ಧಾಟಿ , ಸರಸವಾದ ಕಾವ್ಯ ಸುಂದರ ಚಿತ್ರಪಟಗಳ ಸಹಿತ ಸ್ನೇಹದ ಗುರುತಾಗಿ ಕೊಡಲು ತಕ್ಕದ್ದಾಗಿದೆ

ರೂ. ೧-೦-೦

## ನಿವೇದನ

ಮೈಸೂರು ದೇಶದಲ್ಲಿ ಅತಿ ಮನೋಹರವೆನಿಸಿ ಖ್ಯಾತಿಗೊಂಡು ಪ್ರಕೃತಿ ನಿರ್ಮಿತಗಳಾಗಿಯೂ ಮನುಷ್ಯ ನಿರ್ಮಿತಗಳಾಗಿಯೂ ಇರುವ ದೃಶ್ಯಗಳನ್ನು ಕುರಿತು ಬರೆದಿರುವ ಕವನಗಳೂ ಇತರ ಹಾಡುಗಳೂ ಇದರಲ್ಲಿ ಸೇರಿವೆ. ಇದರಲ್ಲಿ ವರ್ಣಿತವಾಗಿರುವ ದೃಶ್ಯಗಳ ೧೭ ಸುಂದರ ಚಿತ್ರಗಳಿಂದ ಕೂಡಿದೆ

ರೂ. ೦-೧೨-೦.

## ವೃತ್ತಪತ್ರಿಕೆಗಳು

ವಾರ್ತಾಪತ್ರಿಕೆಗಳ ಚರಿತ್ರೆ, ಅವುಗಳ ಉದ್ದೇಶ, ಅವುಗಳ ಬೆಳವಣಿಗೆ, ಅವುಗಳಿಂದಾಗಬಲ್ಲ ಉಪಕಾರ ಅಪಕಾರಗಳು, ಈ ಪುಸ್ತಕದಲ್ಲಿ ವಿವರವಾಗಿದೆ

ರೂ. ೦-೧೨-೦.

## ಜೀವನ ಸೌಂದರ್ಯ ಮತ್ತು ಸಾಹಿತ್ಯ

ಈ ಪುಸ್ತಕದಲ್ಲಿ ಕನ್ನಡ ಭಾಷೆಯ ಮತ್ತು ಕಾವ್ಯ ಸಂಪತ್ತಿನ ಸ್ವರೂಪವನ್ನೂ ಆದರ್ಶವನ್ನೂ ಅಭಿವೃದ್ಧಿಯ ಮಾರ್ಗಗಳನ್ನೂ ವಿವರಿಸಿ ಚರ್ಚಿಸುವ ಆರು ಉಪನ್ಯಾಸಗಳು ಸೇರಿವೆ.

ಸಾದಾ ಪ್ರತಿ ರೂ. ೧-೧೦-೦. ಉತ್ತಮ ಪ್ರತಿ [illegible]

---

**ಕರ್ಣಾಟಕ ಪ್ರಕಟನಾಲಯ, ಬೆಂಗಳೂರು ಸಿಟಿ.**